ನವಸಾಕ್ಷರ ಪುಸ್ತಕ ಮಾಲೆ ೨೨

# ಮೋತಿಯ ಸಾಹಸಗಳು

ಕೆ. ಪ್ರಫುಲ್ಲಾ ಪೈ






ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಲೆ

ಯ

ಎಸ್.

ಾಲಯ

ು

ಲೋಕಶಿಕ್ಷಣ ನಿರ್ದೇಶನಾಲಯ
ನವಸಾಕ್ಷರ ಪುಸ್ತಕ ಮಾಲೆ—೭೭

# ಮೋತಿಯ ಸಾಹಸಗಳು



ಕೆ. ಪ್ರಫುಲ್ಲಾ ಪೈ





ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ—೫೮೩ ೨೭೧

**MOTHIYA SAAHASAGALU :** By K. Prafulla Pai. Published by The Director of Prasaranga, Kannada University, Hampi – 583 211, KARNATAKA.
First Impression 1994, Pp. ii + 26, Rs. 8.00

---





**ಸಂಯೋಜನಾಧಿಕಾರಿ**
ಡಾ|| ಎಚ್.ಎಸ್.ಶ್ರೀಮತಿ
ಪಠ್ಯಪುಸ್ತಕ ರಚನಾ ವಿಭಾಗ

**ಪ್ರಕಾಶಕರು**
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ—೫೮೩ ೨೧೧

**ಮುಖಪುಟ ವಿನ್ಯಾಸ**
ಕೆ. ಮಕಾಳಿ

**ಬೆಲೆ: ರೂ ೮.೦೦**

ಮುದ್ರಕರು
ಅಭಿಮಾನಿ ಪ್ರಕಾಶನ
೯೬, ಡಾ.ರಾಜಕುಮಾರ್ ರಸ್ತೆ,
ರಾಜಾಜಿನಗರ,
ಬೆಂಗಳೂರು—೫೬೦ ೦೨೧




# ಮೋತಿಯ ಸಾಹಸಗಳು

ಒಂದೇ ಸಮನೆ ಮಳೆಯು ಸುರಿಯುತ್ತಿತ್ತು. ಬಾಗಿಲು ಮುಚ್ಚಿದ ಮನೆಯೊಂದರ ಹೊರ ಜಗುಲಿಯಲ್ಲಿ ಪುಟ್ಟ ನಾಯಿ ಮರಿಯೊಂದು ಮುದುರಿ ನಡುಗುತ್ತಾ ಕುಳಿತಿತ್ತು.

ಪ್ರಾಥಮಿಕ ಶಾಲೆಯು ಆಗ ತಾನೇ ಬಿಟ್ಟಿತ್ತು. ಒಂದೇ ಕೊಡೆಯಡಿಯಲ್ಲಿ ತಮ್ಮ ಸಮವಸ್ತ್ರಗಳನ್ನು ಮುದುರಿಕೊಂಡು ತಂತಮ್ಮ ಪುಸ್ತಕದ ಚೀಲಗಳನ್ನು ಒದ್ದೆಯಾಗದಂತೆ ನೋಡಿಕೊಳ್ಳುತ್ತ ಸಂಧ್ಯಾ ಮತ್ತು ರವಿ ಬರುತ್ತಿದ್ದರು.

ದಾರಿಯಲ್ಲಿ ಬರುತ್ತಿರುವಾಗ ಫಕ್ಕನೆ ರವಿಯ ನೋಟವು ಆ ನಾಯಿಮರಿಯ ಕಡೆಗೆ ಹರಿಯಿತು. "ಸಂಧ್ಯಾ ಅಕ್ಕ, ಸಂಧ್ಯಾ ಅಕ್ಕ,ನೋಡಲ್ಲಿ ಎಷ್ಟು ಪುಟ್ಟ ನಾಯಿಮರಿ. ನಾವು ಅದನ್ನು ಮನೆಗೆ ಕೊಂಡು ಹೋಗೋಣವಾ?" ಎಂದು ಅವನು ಸಂತಸದಿಂದ ಚಪ್ಪಾಳೆಯನ್ನು ತಟ್ಟಿದನು.

"ಬೇಡ ರವಿ, ಪಪ್ಪ ಬಯ್ಯುತ್ತಾರೆ." ಎಂದಳು ಸಂಧ್ಯಾ. "ಊಹೂಂ, ನನಗೆ ಈ ನಾಯಿ ಮರಿಯು ಬೇಕೇ ಬೇಕು. ಎಷ್ಟು ಚೆನ್ನಾಗಿದೆ ಅದು",ರವಿಯು ಹಟ ಹಿಡಿದು ಮುಂದಕ್ಕೆ ಹೋಗಲು ಒಪ್ಪಲೇ ಇಲ್ಲ.

ಅವನ ಹಟಕ್ಕೆ ಮಣಿದು ಒಲ್ಲದ ಮನಸ್ಸಿನಿಂದ ಸಂಧ್ಯಾ ತಾನೂ ಒಪ್ಪಿದಳು.



ರಸ್ತೆಯಲ್ಲಿ ಸಿಕ್ಕ ನಾಯಿಮರಿಯನ್ನು ಮನೆಗೆ ತರುತ್ತಿರುವುದು

ಸರಿ. ರವಿಯು ಜಗುಲಿಯನ್ನೇರಿದನು. ಆ ನಾಯಿಮರಿಯನ್ನೆತ್ತಿಕೊಂಡನು. ವೀರಾಧಿವೀರನಂತೆ ಜಗುಲಿಯಿಂದಿಳಿದು ಸಂಧ್ಯಾಳ ಜೊತೆಗೆ ಮನೆಯ ಕಡೆಗೆ ನಡೆದನು.

ಬಿಳಿಯ ಮೈ ಬಣ್ಣದ ಆ ಪುಟಾಣಿ ನಾಯಿಮರಿಯು ದುಂಡು ದುಂಡಗೆ ಮುದ್ದಾಗಿತ್ತು.

'ಸಂಧ್ಯಾ-ರವಿ ನಿಲಯ'ವನ್ನು ಸಮೀಪಿಸುತ್ತಲೇ ಮಕ್ಕಳಿಬ್ಬರೂ ಉತ್ಸಾಹದಿಂದ "ಅಮ್ಮಾ" ಎಂದು ಕೂಗು ಹಾಕಿದರು.

ಅವರ ಬರುವನ್ನೇ ಕಾತರದಿಂದ ಕಾಯುತ್ತಿದ್ದ ತಾಯಿ ಉಮಾದೇವಿಯು ಹೊರಗೆ ಬಂದಳು. ಈ ನಾಯಿಮರಿಯನ್ನು ನೋಡುತ್ತಲೇ ಕೋಪದಿಂದ ಆಕೆಯ ಹುಬ್ಬುಗಳು ಗಂಟಿಕ್ಕಿದುವು.

ರವಿಯು ತಲೆ ಎತ್ತಿ ತನ್ನ ಅಮ್ಮನನ್ನೇ ದಿಟ್ಟಿಸಿದನು. ತನ್ನ ಎರಡೂ ಕೈಗಳನ್ನು ಆಕೆಯ ಕುತ್ತಿಗೆಗೆ ಹಾರದಂತೆ ತೊಡಿಸಿ, "ಅಮ್ಮಾ, ನನ್ನ ಮುದ್ದು ಅಮ್ಮ ಪಪ್ಪನನ್ನು ನೀನು ಹೇಗಾದರೂ ಮಾಡಿ ಒಪ್ಪಿಸು. ನಿನ್ನ ಮಾತನ್ನಾದರೆ ಅವನು ಖಂಡಿತ ಕೇಳುತ್ತಾನೆ" ಎಂದನು ರವಿ. ಆಕೆಯ ಎರಡೂ ಗಲ್ಲಗಳಿಗೆ ಮುತ್ತುಗಳನ್ನು ಕೊಟ್ಟನು.

ಗಂಟಿಕ್ಕಿದ್ದ ಆಕೆಯ ಹುಬ್ಬುಗಳು ತುಸು ಸಡಿಲಗೊಂಡಿದ್ದುವು. ಕಣ್ಣುಗಳು ತಿಳಿನಗೆಯಿಂದ ಅರಳಿದ್ದುವು.

ಅದನ್ನು ನೋಡಿ ರವಿಯೂ ತುಸು ಭರವಸೆಯನ್ನು ಹೊಂದಿದನು. ತಾಯಿ ಹೇಳಿದ ಕೆಲಸಗಳನ್ನೆಲ್ಲಾ ಚಾಚೂ ತಪ್ಪದಂತೆ ಮಾಡಿ ಮುಗಿಸಿದನು. ಒಂದು ಹಳೆಯ ಬಟ್ಟೆಯಿಂದ ನಾಯಿಮರಿಯ ಮೈಯನ್ನು ಚೆನ್ನಾಗಿ ತಿಕ್ಕಿ ಒರೆಸಿದನು. ಹೊರ ಜಗುಲಿಯಲ್ಲಿ ಕಿಟಕಿಯ ಪಕ್ಕದಲ್ಲಿ ಒಂದು ಗೋಣಿ ತಟ್ಟನ್ನು ಹಾಸಿದನು. ಪುಟ್ಟ ಹಗ್ಗವನ್ನು ಅದರ ಕೊರಳಿಗೆ ಹಾಕಿ ಕಿಟಕಿಯ ಸರಳಿಗೆ ಅದನ್ನು ಕಟ್ಟಿಹಾಕಿದನು ರವಿ. ನಾಯಿಮರಿಯು ಆ ಗೋಣಿ ಪಟ್ಟೆಯ ಮೇಲೆ ಹಾಯಾಗಿ ಬಾಲವನ್ನು ಅಲ್ಲಾಡಿಸುತ್ತಾ ಕೂತಿತು.

ಅಂದು ಸಂಜೆಯ ತಿಂಡಿಗೆಂದು ಗರಿಗರಿಯಾದ ಉದ್ದಿನ ದೋಸೆಗಳನ್ನು ತಯಾರಿಸಿದ್ದಳು ಉಮಾದೇವಿ. ಮೊದಲು ನಾಯಿಮರಿಗೆ ಒಂದು ಇಡೀ ದೋಸೆಯನ್ನೇ ಉದಾರವಾಗಿ ಕೊಟ್ಟನು ರವಿ. ಬಳಿಕ ತಾನೂ ದೋಸೆ-ಕಾಫಿಗಳನ್ನು ಸೇವಿಸಿದನು.

ಸಾಯಂಕಾಲ ಐದೂವರೆ ಘಂಟೆಯ ಸಮಯ. ರವಿಯ ಪಪ್ಪ ಬಂದರು. ನಾಯಿಮರಿಯನ್ನು ನೋಡಿದರು. ಅಸಹ್ಯದಿಂದ ಮುಖವನ್ನು ಸಿಂಡರಿಸಿದರು. "ಈ ಕೊಳಕು ನಾಯಿಮರಿಯನ್ನು ಮನೆಗೆ ತಂದವರು ಯಾರು?" ಎಂದು ಗರ್ಜಿಸಿದರು.

"ನಾನು ಪಪ್ಪಾ" ರವಿಯು ಹೆದರುತ್ತ ಹೆದರುತ್ತ ಸಣ್ಣ ಸ್ವರದಲ್ಲಿ ಉತ್ತರಿಸಿದನು.

"ರವಿ, ಸಾಕು ಪ್ರಾಣಿಗಳು ನಾನಾ ತರಹದ ರೋಗಗಳನ್ನು ತಂದೊಡ್ಡುತ್ತವೆ. ನಾಯಿಗಳಿಗೆ ಕೆಲವೊಮ್ಮೆ ಹುಚ್ಚು ಹಿಡಿಯುವುದೂ ಉಂಟು. ನಿನಗೆ ಬೇಕಾದರೆ ಷೋಕೇಸಿನಲ್ಲಿಡಬಹುದಾದಂತಹ ಪಿಂಗಾಣಿಯ ಅಥವಾ ಸೆಲ್ಯೂಲಾಯಿಡ್‌ನ

ನಾಯಿಮರಿಯ ಬೊಂಬೆಯನ್ನು ತಂದುಕೊಡುತ್ತೇನೆ." ಎಂದು ಪರಿಪರಿಯಾಗಿ ಮಗನನ್ನು ರಮಿಸಿದರು ಪಪ್ಪ.

"ಊಹೂಂ, ನನಗೆ ಇದೇ ನಾಯಿಮರಿ ಬೇಕು. ಬೊಂಬೆ ನಾಯಿಮರಿಗೆ ಎಲ್ಲಾದರೂ ಜೀವವಿರುತ್ತದೆಯೇ? ಕೂತಲ್ಲೇ ಸೆಗಣಿ ಮುದ್ದೆಯ ಹಾಗೆ ಕೂತಿರುತ್ತದೆ ಅದು. ಪಪ್ಪಾ, ಇದಾದರೆ ದೋಸೆ, ಅನ್ನ ತಿನ್ನುತ್ತದೆ. ಹೇಗೆ ಬಾಲ ಅಲ್ಲಾಡಿಸುತ್ತದೆ ನೋಡಿದೆಯಾ ಪಪ್ಪಾ? ಅದು ನನ್ನ ಗುರುತು ಹಿಡಿಯುತ್ತದೆ." ಎಂದು ರವಿಯು ಕಣ್ಣುಗಳನ್ನರಳಿಸಿ ಹೇಳಿದನು.

ಕೊನೆಗೆ ಅಮ್ಮನೇ ಬಂದು ಅವರಿಬ್ಬರ ನಡುವೆ ರಾಜಿ ಮಾಡಿಸಿದಳು. "ರವಿ, ನೀನು ಈ ನಾಯಿಮರಿಯನ್ನೆಲ್ಲಾದರೂ ಮುಟ್ಟಿದರೆ ಸೋಪು ಹಾಕಿ ಕೈತೊಳೆದುಕೊಳ್ಳಬೇಕು. ಹಾಗಿದ್ದರೆ ಮಾತ್ರ ಇದು ಇಲ್ಲಿರುತ್ತದೆ." ಎಂದು ಮಗನಿಗೆ ಆಕೆಯು ಎಚ್ಚರಿಕೆಯನ್ನು ನೀಡಿದಳು.

"ನೋಡಿ, ಅವನು ಅಷ್ಟು ಆಸೆ ಪಟ್ಟು ತಂದಿದ್ದಾನೆ. ಇರಲಿ ಬಿಡಿ" ಎಂದು ನಯವಾಗಿ ಹೇಳಿದಳು ಅಮ್ಮ.

ಮನಸ್ಸಿಗೆ ಇಷ್ಟವಿಲ್ಲದಿದ್ದರೂ ರವಿಯ ಪಪ್ಪ ಪತ್ನಿಯ ಮಾತಿಗೆ ಎದುರು ಹೇಳಲಾರದೆ ಸುಮ್ಮನಿರಬೇಕಾಯಿತು.

ತನ್ನ ಮಾತೇ ಗೆದ್ದುದಕ್ಕಾಗಿ ರವಿಗೆ ತುಂಬ ಸಂತಸವಾಯಿತು. 'ಅಮ್ಮಾ.... ಅಮ್ಮ, ನಾಯಿಮರಿಗೊಂದು ಚಂದವಾದ ಹೆಸರಿಡೋಣವೆ?" ಎಂದು ರವಿಯು ತಾಯಿಯನ್ನು ಕೇಳಿದನು.

"ನೀನೇ ಇಡು." ಎಂದು ಅಮ್ಮನು ಹೇಳಿದಳು.

"ಅಮ್ಮಾ, ಆಚೆ ಮನೆಯ ರಮಾನಂದ ಪ್ರಭುಗಳ ನಾಯಿಮರಿಗೆ "ಮೋತಿ" ಎಂದು ಹೆಸರಿದೆ. ನಾವೂ ಅದನ್ನೇ ಇಡೋಣವೆ?"

"ಆ ನಾಯಿಮರಿಯು ಅಲ್ಸೇಶಿಯನ್‌ಜಾತಿಯದ್ದು.ಅದು ತೊಳೆದ ಮುತ್ತಿನಷ್ಟು

ಬಿಳುಪಾಗಿದೆ. ನೋಡಲು ಎಷ್ಟು ಚೆನ್ನಾಗಿದೆ. ಅದಕ್ಕೇ ಆ ಹೆಸರಿಟ್ಟಿದ್ದಾರೆ. ನಿನ್ನ ಕಾಟು ನಾಯಿಗೆ ಮೋತಿ ಎಂದು ಹೆಸರೆ?'' ಮೂಗು ಮುರಿದಳು ಸಂಧ್ಯಾ.

"ಸಂಧ್ಯಾ ಅಕ್ಕ... ಸಂಧ್ಯಾ ಅಕ್ಕ, ನೀನು ನನ್ನ ಸುದ್ದಿಗೆ ಬರಬೇಡ. ನನಗೆ ಇದೇ ಅಲ್ಸೇಶಿಯನ್; ಇದೇ ಪೊಮೇರಿಯನ್; ನನಗೆ ಎಲ್ಲವೂ ಇದೇ. ಮೋತಿ... ಮೋತಿ, ನನ್ನ ಮುದ್ದುಮರಿ ಮೋತಿ;'' ಪ್ರೀತಿಯಿಂದ ರವಿಯು ಕರೆದನು.

'ಆ ಹೆಸರು ನನಗೂ ಒಪ್ಪಿಗೆ,' ಅನ್ನುವಂತೆ "ಕುಯಿಂ... ಕುಯಿಂ,'' ಅಂದಿತು ಮೋತಿ. ಬಳಿಕ ಸ್ನೇಹದಿಂದ ಬಾಲ ಅಲ್ಲಾಡಿಸಿತು ಅದು.

"ಅಮ್ಮಾ, ಮೋತಿಯು ಹೇಗೆ ಓ, ಓ ಅನ್ನುತ್ತಿದೆ ನೋಡಮ್ಮಾ;'' ಎಂದು ರವಿಯು ಸಂತಸದಿಂದ ಚಪ್ಪಾಳೆಯನ್ನು ತಟ್ಟಿದನು.

ಶಿವಪ್ರಸಾದರಿಗೆ ರವಿ, ಸಂಧ್ಯಾ ಇಬ್ಬರೇ ಮಕ್ಕಳು. ಶಿವಪ್ರಸಾದರು ಕಾರ್ಕಳದ ಕಾರ್ಪೊರೇಶನ್ ಬ್ಯಾಂಕಿನಲ್ಲಿ ಆಫೀಸರರಾಗಿದ್ದರು. ಅವರ ಪತ್ನಿ ಉಮಾದೇವಿಯೂ ಪದವೀಧರೆಯಾಗಿದ್ದಳು. ಮಕ್ಕಳನ್ನು ದಂಪತಿಗಳೀರ್ವರೂ ಅಚ್ಚುಮೆಚ್ಚಾಗಿ ಬೆಳೆಸಿದ್ದರು.

ಈಗ ಆ ನಾಲ್ವರ ಚಿಕ್ಕ ಚೊಕ್ಕ ಸಂಸಾರದಲ್ಲಿ ಮೋತಿಯು ಐದನೆಯ ಸದಸ್ಯನಾಗಿ ಸೇರಿತು.

* * *

ಅಂದು ಭಾನುವಾರದ ರಜಾದಿನವಾಗಿತ್ತು. ಉಮಾದೇವಿಯು ಬೆಳಗಿನ ತಿಂಡಿಗೆ ಬಿಸಿಬಿಸಿ ಇಡ್ಲಿಗಳನ್ನು ತಯಾರಿಸಿದಳು. ರವಿಯು ಎರಡು-ಮೂರು ಗುಕ್ಕುಗಳಲ್ಲಿ ತನ್ನ ಎರಡು ಇಡ್ಲಿಗಳನ್ನು ತಿಂದು ಮುಗಿಸಿದನು. ಹಾಲನ್ನು ಒಂದೇ ಬಾರಿಗೆ ಬೇಗಬೇಗನೆ ಹೀರಿದನು. ನಾಯಿಗೆ ಇಡ್ಲಿಯನ್ನು ತಿನ್ನಿಸಲಿಕ್ಕಾಗಿ ತನ್ನ ಅಪ್ಪ ಹೊರಗೆ ಹೋಗುವುದನ್ನೇ ಕಾತರದಿಂದ ಕಾಯುತ್ತಿದ್ದನು ಅವನು.

ಪಪ್ಪ ಹೊರ ತೆರಳಿದ ತಕ್ಷಣ ರವಿಯು ಒಂದೇ ಜಿಗಿತಕ್ಕೆ ಅಮ್ಮನ ಬಳಿ ಸಾರಿದನು. ಪುಟ್ಟ ಮೋತಿಗೆಂದು ದೊಡ್ಡ ಒಂದು ಇಡ್ಲಿಯನ್ನು ಪಡೆದುಕೊಂಡನು.

ಅದನ್ನು ಪಿಂಗಾಣಿಯ ತಟ್ಟೆಯಲ್ಲಿರಿಸಿದನು. ಅಮ್ಮ ಗದರಿಸಿದರೂ ಕೇಳದೆ ಚೂರು ಬೆಣ್ಣೆಯ ಮುದ್ದೆಯನ್ನು ಇಡ್ಲಿಯ ಮೇಲಿಟ್ಟನು. ಮೋತಿಗೆ ಕೊಡಲೆಂದು ಹೊರಗೆ ತಂದನು.



ರವಿಯು ಮೋತಿಗೆ ಇಡ್ಲಿ ಮತ್ತು ಹಾಲನ್ನು ನೀಡುತ್ತಿರುವುದು

ರವಿಯು ತಂದ ಆಹಾರವನ್ನು ನೋಡುತ್ತಲೇ ಮೋತಿಯ ಬಾಯಿಂದ ಜೊಲ್ಲು ಸುರಿಯಿತು. ಅದು ಚೂರೂ ಬಿಡದಂತೆ ಗಬಗಬನೆ ತಿಂಡಿಯನ್ನು ತಿಂದಿತು. ರವಿಯು ಅದರ ಪಿಂಗಾಣಿ ತಟ್ಟೆಗೆ ಹಾಲನ್ನು ಸುರಿದನು. ಅದು 'ಲೊಚ ಲೊಚ' ಎಂದು ಹಾಲನ್ನು ಕುಡಿದು ತೃಪ್ತಿಯಿಂದ ತನ್ನ ಅನ್ನದಾತನನ್ನೇ ನೋಡಿತು.

ಬಳಿಕ ರವಿಯು ಅದರ ಕೊರಳಿಗೆ ಕಟ್ಟಿದ ಹೊಚ್ಚ ಹೊಸ ಕಬ್ಬಿಣದ ಸರಪಣಿಯನ್ನು ಬಿಚ್ಚಿದನು. ಮೋತಿಯು ಹೊರಗೋಡಿ ಹಿತ್ತಲು ಅಂಗಳವನ್ನೆಲ್ಲಾ ಸುತ್ತಾಡಿ ಬಂತು. ಅದು ನೆಲವನ್ನು ಮೂಸಿ ನೋಡಿ, ನೋಡಿ ತನ್ನ ಸುತ್ತಣ ಪರಿಸರದ ಪರಿಚಯವನ್ನು ಎಂದೋ ಮಾಡಿಕೊಂಡಾಗಿತ್ತು.

ಶಿವಪ್ರಸಾದರು ರವಿಯ ಎಂಟನೆಯ ಹುಟ್ಟುಹಬ್ಬದ ದಿನದಂದು 'ಕ್ರಿಕೆಟ್ ಆಟದ ಸೆಟ್ಟೊಂದನ್ನು ಮಗನಿಗೆ ಉಡುಗೊರೆಯಾಗಿತ್ತಿದ್ದರು. ಎಂದಿನಂತೆ ಅಂದೂ ಕ್ರಿಕೆಟ್ ಆಟದ ಸಾಮಗ್ರಿಗಳನ್ನು ಹಿಡಿದುಕೊಂಡು ಮನೆಯ ಮುಂಭಾಗದ ಅಂಗಳಕ್ಕೆ ಹೊರಟರು ಮಕ್ಕಳು. ಮೋತಿಯೂ ಅವರ ಹಿಂದೆಯೇ ಬಂದಿತು.



ಆಟದಲ್ಲಿ ಮೋತಿ ಚೆಂಡನ್ನು ಎತ್ತಿಕೊಂಡು ಬರುತ್ತಿರುವುದು

ರವಿ ಮತ್ತು ಸಂಧ್ಯಾ ಆಡುತ್ತಿರುವಾಗ ದೂರಕ್ಕೆ ಪುಟಿದ ಚೆಂಡನ್ನು ಮೋತಿಯು ಬಾಯಲ್ಲಿ ಕಚ್ಚಿ ತಂದುಕೊಡುತ್ತಿತ್ತು. ಚೆಂಡು ಎಷ್ಟು ದೂರ ಬಿದ್ದರೂ ಅದಕ್ಕೆ ಬೇಸರವೆಂಬುದೇ ಇರಲಿಲ್ಲ. ಚುರುಕಾಗಿ ಓಡಿ ಚೆಂಡನ್ನು ಮಕ್ಕಳಿಗೆ ತಂದುಕೊಡುವುದರಲ್ಲಿ ಅದಕ್ಕೆ ತುಂಬ ಆಸಕ್ತಿ. ತಾನೂ ಮಕ್ಕಳೊಡನೆ ಸೇರಿ ಆಡುತ್ತಿದ್ದೇನೆಂದು ಅದಕ್ಕೆ ಎಲ್ಲಿಲ್ಲದ ಹೆಮ್ಮೆ.

ಒಂದೆರಡು ಘಂಟೆಗಳಷ್ಟು ಕಾಲ ಆಡಿದರು ಮಕ್ಕಳು. ಬಳಿಕ ಮನೆಯ ಹಿಂದೆ, ತುಸುದೂರದಲ್ಲಿರುವ'ಹೊಂಗೆಯ ಕೊಳ'ಕ್ಕೆ ಈಜಲು ತೆರಳಿದರು. ಹೋಗುವ ಮೊದಲು ಪಪ್ಪನ ಒಪ್ಪಿಗೆಯನ್ನು ಪಡೆಯಲು ಮರೆಯಲಿಲ್ಲ ಅವರು. ಶಿವಪ್ರಸಾದರು

ಕೊಳದ ನಡುವಿಗೆ ಹೋಗದೆ, ಬದಿಯಲ್ಲೇ ಈಜಲು ಅವರಿಗೆ ಒಪ್ಪಿಗೆಯನ್ನು ಕೊಟ್ಟರು.

ಸ್ವತಃ ಒಳ್ಳೆಯ ಈಜುಗಾರರಾಗಿದ್ದ ಶಿವಪ್ರಸಾದರು ರವಿ ಮತ್ತು ಸಂಧ್ಯಾರಿಗೆ ಈಜನ್ನು ಕಲಿಸಿದ್ದರು. ಜೀವನದಲ್ಲಿ ಮುಂದೆಂದಾದರೂ ನೀರಿನಿಂದ ಅಪಾಯವು ಸಂಭವಿಸಿದರೆ ತಮ್ಮನ್ನು ತಾವು ರಕ್ಷಿಸಿಕೊಳ್ಳಲು ಈ ವಿದ್ಯೆಯ ಮೂಲಕ ಮಕ್ಕಳು ಸಮರ್ಥರಾಗಬೇಕೆಂಬುದೇ ಅವರ ಆಶಯವಾಗಿತ್ತು. ತಂದೆಯ ಒತ್ತಾಸೆಯಿಂದ ಅಷ್ಟು ಪುಟ್ಟ ಮಕ್ಕಳು ನಿಸ್ಸೀಮ ಈಜುಗಾರರಾಗಿದ್ದರು.

'ಸಂಧ್ಯಾ-ರವಿ ನಿಲಯ'ಕ್ಕೆ ತುಸು ದೂರದಲ್ಲಿ ನಾರಾಯಣರಾಯರ ಮನೆಯಿತ್ತು.

ನಾರಾಯಣರಾಯರು ಶಿವಪ್ರಸಾದರ ಅಪ್ತಗೆಳೆಯರಾಗಿದ್ದರು. ನಾರಾಯಣರಾಯರಿಗೆ ಸುಮಾರು ಹತ್ತೆಕರೆಯಷ್ಟು ಗದ್ದೆ, ಒಂದೆರಡು ಎಕರೆಯಷ್ಟು ತೆಂಗಿನ ತೋಟವೂ ಇದ್ದಿತು. ಅವುಗಳಿಗೆ ನೀರನ್ನು ಒದಗಿಸಲು ರಾಮಸಮುದ್ರಕ್ಕೆ ಪುಟ್ಟ ಕಾಲುವೆಯೊಂದನ್ನು ತೋಡಿದ್ದರವರು. ಕಾಲುವೆಯಿಂದ ಹರಿದು ಬಂದ ನೀರು ನಿಲ್ಲಲು ಮುರಕಲ್ಲಿನಿಂದ ಅಗಲವಾದ ಸೋಪಾನವೊಂದನ್ನು ಕಟ್ಟಿಸಿದ್ದರು. ಕೊಳವೆಂದು ಕರೆಯಲು ಅದರಲ್ಲಿ ಅಂದವಾದ ತಾವರೆ-ನೈದಿಲೆಗಳು ಅರಳುತ್ತಿರಲಿಲ್ಲ. ಆದರೂ ಸಂಧ್ಯಾ ಆ ಜಲಾಶಯದ ಮೇಲೊಂದು ಹೊಂಗೆಯ ಮರವಿರುವುದನ್ನು ಆಧರಿಸಿ ಅದಕ್ಕೆ 'ಹೊಂಗೆಯ ಕೊಳ'ವೆಂದು ನಾಮಕರಣವನ್ನು ಮಾಡಿದ್ದಳು. ಇವರೆಲ್ಲ ಅದರಲ್ಲಿ ಈಜುತ್ತಿರುವುದು ನಾರಾಯಣರಾಯರಿಗೆ ಸಂತಸದ ವಿಷಯವಾಗಿತ್ತು.

ಹೊಂಗೆಯ ಮರದ ನೆರಳಿನಲ್ಲಿ, ತಂಪಾದ ಕೊಳದಲ್ಲಿ ಮಕ್ಕಳು ಮನದಣಿಯೆ ಈಜಿದರು. ಹೊತ್ತು ಹೋದುದೇ ತಿಳಿಯಲಿಲ್ಲ. ಮೇಲೆ ದಡದಲ್ಲಿ ಮೋತಿಯು ಅವರ ಬಟ್ಟೆಗಳನ್ನು ತಾಳ್ಮೆಯಿಂದ ಕಾದು ಕೂತಿತ್ತು.

* * *

ಮೋತಿಯು ರವಿಯ ಮನೆಗೆ ಬಂದು ವರ್ಷದ ಹತ್ತಿರವಾಯಿತು. ಈಗ ಅದು ತುಸು ಎತ್ತರವಾಗಿ ಬೆಳೆದಿದೆ. ಅದು ತನ್ನ ಮೈಯನ್ನು ನೆಕ್ಕಿಕೊಂಡು ಸದಾ

ಸ್ವಚ್ಛವಾಗಿಡುತ್ತದೆ. ರವಿಯು ಅದರ ಬೆಳ್ಳಗಿನ ಕೊರಳಿಗೆ ಚಿನ್ನದ ಬಣ್ಣದ ಪಟ್ಟಿಯನ್ನು ತೊಡಿಸಿದ್ದಾನೆ. ಹೊಸಬರು ಯಾರಾದರೂ ಮನೆಯ ಬಳಿಗೆ ಬಂದರೆ ತನ್ನ ಕೋರೆ ಹಲ್ಲುಗಳನ್ನು ತೋರಿಸಿ ಅದು 'ಗುರ್ರ್'ನ್ನುತ್ತದೆ. ರಾತ್ರಿ ಅದರ ಕೊರಳ ಕಬ್ಬಿಣದ ಸಂಕೋಲೆಯನ್ನು ಬಿಚ್ಚಿಬಿಡುತ್ತಾರೆ. ಆಗ ಅದು ತಾನು ಇಡೀ ಜಾಗದ ರಾಜನೆನ್ನುವಂತೆ ಗಂಭೀರವಾಗಿ ಹಿತ್ತಲು- ಅಂಗಳಗಳಲ್ಲೆಲ್ಲಾ ಗಸ್ತು ತಿರುಗುತ್ತದೆ.

ಈಗ ರವಿ ಮತ್ತು ಸಂಧ್ಯಾ ಮನೆಯ ಅಂಗಳದಲ್ಲೊಂದು ಪುಟ್ಟ ಹೂವಿನ ತೋಟವನ್ನೂ, ಹಿತ್ತಲಲ್ಲಿ ಒಂದು ಪುಟ್ಟ ತರಕಾರಿಯ ತೋಟವನ್ನೂ ಎಬ್ಬಿಸಿದ್ದಾರೆ. ಎರಡು ತೋಟಗಳಿಗೂ ಆಳುಗಳ ಸಹಾಯದಿಂದ ಗಟ್ಟಿಯಾದ ಕಬ್ಬಿಣದ ಬೇಲಿಯನ್ನು ಹಾಕಿಸಿದ್ದಾರೆ. ಯಾವುದಾದರೂ ದನವು ಬೇಲಿಯೆಡೆಯಿಂದ ಬಾಯಿ ಹಾಕಿದರೆ ಸಾಕು, ಮೋತಿಯು ಅದರ ಮೇಲೆ ಹಾರುವಂತೆ ನಟಿಸಿ, ಬೊಗಳಿ ಅದನ್ನು ಹೆದರಿಸಿ ಓಡಿಸುತ್ತಿತ್ತು. ಈ ರೀತಿ ಅದು ಹಿತ್ತಲು-ಅಂಗಳಗಳಲ್ಲಿ ಚುರುಕಾಗಿ ಓಡಾಡಿ ಎರಡು ತೋಟಗಳನ್ನೂ ಶ್ರದ್ಧೆಯಿಂದ ಕಾಯುತ್ತಿತ್ತು.

ಈಗ ಉಮಾದೇವಿಯೂ ಮೋತಿಯನ್ನು ತುಂಬ ಮೆಚ್ಚಿಕೊಂಡಳು. ಮೋತಿಯನ್ನು ನೋಡಿದವರೆಲ್ಲ ಹೊಗಳಲು ಮೊದಲು ಮಾಡಿದರು.

ಮೋತಿಯನ್ನು ಯಾರೆಷ್ಟು ಹೊಗಳಿದರೂ ಶಿವಪ್ರಸಾದರಿಗೆ ಮಾತ್ರ ಆ ವಿಷಯದಲ್ಲಿ ಆಸಕ್ತಿಯಿರಲಿಲ್ಲ. ಆ ನಾಯಿಯನ್ನವರು ಮಗನಿಗಾಗಿ ಸಹಿಸಿಕೊಂಡಿದ್ದರು. ತನ್ನನ್ನು ಕಂಡರೆ ಅವರಿಗಾಗದೆಂದು ಮೋತಿಗೂ ಗೊತ್ತು. ಅದು ಅವರ ಸಮೀಪ ಸುಳಿಯುತ್ತಿರಲಿಲ್ಲ.

ವಾರಕ್ಕೊಮ್ಮೆ ಸಂತೆಯಿಂದ ಮೀನು ತರುವುದು ಅವರ ಮನೆಯಲ್ಲಿನ ಒಂದು ಪದ್ಧತಿ. ಅಂದು ಸಾಯಂಕಾಲ 'ಶನಿವಾರ ಸಂತೆ'ಯಿಂದ ಪಲ್ಯಕ್ಕೆಂದು 'ಬಂಗುಡೆ' ಮೀನನ್ನು ತಂದಿದ್ದರು ಶಿವಪ್ರಸಾದರು. ಮೋತಿಗೆ ಅಂದು ಸಂತಸವೋ ಸಂತಸ ಉಮಾದೇವಿಯು ಈಳಿಗೆ ಮಣೆಯಲ್ಲಿ ಬಂಗುಡೆ ಮೀನುಗಳನ್ನು ಒಂದೊಂದಾಗಿ ಹೆಚ್ಚಿದಳು. ಅದರ ತಲೆ, ಬಾಲ, ಕರುಳು ಮೊದಲಾದುವನ್ನು ಮೋತಿಗೆ ಹಾಕಿದಳು. ಅದು ಚೂರೂ ಬಿಡದಂತೆ ಚಪ್ಪರಿಸಿ ತಿಂದಿತು. ಮೀನನ್ನು ಸ್ವಚ್ಛವಾಗಿ ನೀರಿನಿಂದ ತೊಳೆಯುವಾಗ ಕಾಗೆಗಳು ಬಾಯಿ

ಹಾಕದಂತೆ ಅದು ಕಾದು ಕೂತಿತು. ಉಮಾದೇವಿಯು ತೊಳೆದ ಮೀನಿನ ತುಂಡುಗಳನ್ನು ಪಾತ್ರೆಯಲ್ಲಿ ತುಂಬಿಸಿದಳು. ಸಾಬೂನಿನಿಂದ ಕೈಯನ್ನು ವಾಸನೆ ಹೋಗುವಂತೆ ತಿಕ್ಕಿ, ತೊಳೆದು ಪಾತ್ರೆಯೊಡನೆ ಒಳಗೆ ಹೋದಳು. ಇನ್ನು ಮೋತಿಯ ಕೆಲಸವು ಮುಗಿಯಿತು. ಅದು ನಿಶ್ಚಿಂತೆಯಿಂದ ಮನೆಯ ಹೊರಗಿನ ಮೆಟ್ಟಲಿನ ಮೇಲೆ ಮೈಚಾಚಿ ಮಲಗಿತು.

ರಾತ್ರಿ ಎಲ್ಲರ ಊಟವು ಮುಗಿಯುವವರೆಗೆ ಕಾದು ಕೂತಿತ್ತು. ಉಮಾದೇವಿಯು ಉಳಿದ ಮೀನಿನ ಮುಳ್ಳುಗಳ ಜೊತೆಗೆ ಒಂದಿಷ್ಟು ಅನ್ನವನ್ನು ಬಾಳೆಯೆಲೆಯಲ್ಲಿ ಹಾಕಿ ಹೊರಗೆ ಇಟ್ಟಳು. ಮೋತಿಯು "ಕರುಂ... ಕುರುಂ" ಎಂದು ಶಬ್ದವನ್ನು ಮಾಡುತ್ತ ಆ ಮುಳ್ಳುಗಳನ್ನು ಚಪ್ಪರಿಸಿ ಪಂಚಭಕ್ಷ್ಯ ಪರಮಾನ್ನವನ್ನು ಉಂಡಷ್ಟು ತೃಪ್ತಿಯಿಂದ ಅನ್ನದೊಡನೆ ತಿಂದಿತು. ತನ್ನ ನಿತ್ಯದ ಕರ್ತವ್ಯವಾದ ಮನೆ-ಹಿತ್ತಿಲುಗಳನ್ನು ಕಾಯಲು ತೆರಳಿತು. ಈಗೀಗ ಮನೆಯಲ್ಲಿ ಅದನ್ನು ಯಾರೂ ಕಟ್ಟಿಹಾಕುವ ಗೋಜಿಗೆ ಹೋಗುತ್ತಿರಲಿಲ್ಲ.

ಆ ದಿನ... ಮೋತಿಯ ಜೀವನದಲ್ಲಿಯೇ ಭಯಂಕರವಾದ ದುರ್ದಿನವಾಗಿತ್ತು; ಬದನೆಯ ಗಿಡಗಳ ನಡುವೆ ಕಪ್ಪನೆಯ ಆಕಾರವೊಂದು ಮೆಲ್ಲಗೆ ಚಲಿಸಿದಂತೆ ಕಂಡಿತು ಅದಕ್ಕೆ. ಅದು ಎಚ್ಚರಿಕೆಯ ರೂಪವಾಗಿ'ಬೌವ್... ಬೌವ್" ಎಂದು ಬೊಗಳುತ್ತ ಮುಂದೆ ಹೋಯಿತು. ಎದುರಿಗೆ ನೋಡುವುದೇನು? ದೈತ್ಯಾಕಾರದ ಕಪ್ಪುಬಣ್ಣದ ನಾಯಿಯೊಂದು ತನ್ನ ಕೆಂಗಣ್ಣುಗಳನ್ನಗಲಿಸಿ ಮೋತಿಯ ಮುಂದೆಯೇ ನಿಂತಿದೆ; ಕ್ಷಣದೊಳಗೆ ಅದು ಬೊಗಳುತ್ತಾ ಮೋತಿಯ ಮೇಲೆಯೇ ಹಾರಿತು; ಅದೇ ಸಮಯಕ್ಕೆ ಭಯದಿಂದ ಕಂಗೆಟ್ಟ ಮೋತಿಯು ಬೇಲಿಯೆಡೆಯಿಂದ ಹೊರನುಸುಳಿಯೂ ಆಗಿತ್ತು.

ಮೋತಿಯು ಓಡಿತು.. ಓಡಿತು... ಕುಂಡೆಗೆ ಕಾಲುಕೊಟ್ಟು ಓಡಿತು; ಮರಗಿಡಗಳು ಮನೆ ಮಠಗಳು ಒಂದೇ ಸಮನೆ ಮಾಯವಾಗುತ್ತಿದ್ದುವು. ಅದಕ್ಕೆ ಕಾಲು ಸೋತು ಕಣ್ಣು ಕತ್ತಲಿಕ್ಕುತ್ತಿತ್ತು;ಅದಕ್ಕೆ ತುಂಬಾ ಹಸಿವೂ, ಬಾಯಾರಿಕೆಯೂ ಆಗಿದ್ದುವು. ಅದು ಸುತ್ತಲೂ ನೋಡಿತು.

ಆಗತಾನೇ ಬೆಳಕು ಹರಿದಿತ್ತು, ತುಸು ದೂರದಲ್ಲಿ ಭವ್ಯವಾದ ಉಪ್ಪರಿಗೆಯ ಮನೆಯೊಂದು ಗೋಚರಿಸುತ್ತಿತ್ತು. ಮನೆಯ ಮುಂಭಾಗದಲ್ಲಿ, ಲಿಲ್ಲಿ, ಡೇಲಿಯಾ, ಜೀನಿಯಾ ಮೊದಲಾದ ಹೂಗಿಡಗಳು ಮತ್ತು ತರಹೆ ತರಹೆಯ ಕ್ರೋಟನ್ನುಗಳ ಸೊಗಸಾದ ಹೂದೋಟವಿತ್ತು. ನಡುವಿನಲ್ಲಿ ಹಸುರು ಹುಲ್ಲಿನ ಲಾನ್ ಕಂಗೊಳಿಸುತ್ತಿತ್ತು.

ತೋಟದ ಮಾಲಿಯು ಪೈಪಿನಿಂದ ಗಿಡಗಳಿಗೆ ನೀರನ್ನು ಹನಿಸುತ್ತಿದ್ದನು. ಮೋತಿಯು ಕಾಂಪೌಂಡಿನ ಗೇಟನಿಂದ ಒಳ ನುಸುಳಿ ಒಂದು ಗಿಡದ ಬುಡದಲ್ಲಿ ನಾಲಿಗೆಯನ್ನು ಹೊರಚಾಚಿ ಏದುಸಿರು ಬಿಡುತ್ತಾ ಮಲಗಿಕೊಂಡಿತು.

ಇಬ್ಬರು ಪುಟ್ಟ ಹುಡುಗಿಯರು ಮನೆಯಿಂದ ಹೊರಗೆ ಬಂದರು. ಕಿವಿಯಲ್ಲಿ ಉಂಗುರದ ಲೋಲಾಕುಗಳು ಮಿನುಗುತ್ತಿದ್ದುವು. ಮೋತಿಯು ನಿಧಾನವಾಗಿ ಮುಂದೆ ಸರಿದು ಅವರ ಕಾಲುಗಳನ್ನು ನೆಕ್ಕಿತು. ಇದರಿಂದ ಆ ಪುಟ್ಟ ಚೆಲುವೆಯರು ತುಂಬಾ ಹರ್ಷಗೊಂಡರು. ಅವರಲ್ಲಿ ಹಿರಿಯವಳಾದ ಸ್ವಾತಿಯು "ಮಮ್ಮಿ, ಮಮ್ಮಿ, ಬೇಗ ಬಾ. ಇಲ್ಲೊಂದು ಪುಟ್ಟ ನಾಯಿಮರಿಯು ಬಂದಿದೆ" ಎಂದು ಉಲ್ಲಾಸದಿಂದ ಕೂಗು ಹಾಕಿದಳು.

ತಾಯಿಯು ಹೊರಗೆ ಬಂದು ಇಣಿಕಿದಳು. "ಥೂ; ಈ ಕಾಟು ನಾಯಿಮರಿಯೇನು? ಎಲ್ಲೆಲ್ಲಿ ಅಲೆದು ಕೊನೆಗೆ ಇಲ್ಲಿಗೆ ಬಂದಿದೆ. ನೀವದನ್ನು ಮುಟ್ಟಬೇಡಿ" ಎಂದಾಕೆಯು ಆಜ್ಞಾಪಿಸಿದಳು.

ಅವಳ ಕಣ್ಣುಗಳಲ್ಲಿನ ತಿರಸ್ಕಾರವು ಮೋತಿಗೆ ಅರ್ಥವಾಯಿತು. ಅದು 'ಕುಯಿಂ... ಕುಯಿಂ,' ಎಂದು ಅಳು ಧ್ವನಿಯೆತ್ತಿತ್ತು. "ಬೌವ್... ಬೌವ್..." ಎಂದು ಬೊಗಳಿತು. "ರವಿ ಮತ್ತು ಸಂಧ್ಯಾರ ಮನೆ ಎಲ್ಲಿದೆಯೆಂದು ನನಗೆ ಹೇಳುವಿರಾ?" ಎಂದೇ ಅದರ ಮೂಕರೋದನವಾಗಿತ್ತು. ಆದರೆ ಆ ಹುಡುಗಿಯರಿಗೆ ಅದರ ಭಾಷೆಯು ಅರ್ಥವಾಗಲೇ ಇಲ್ಲ.

"ಮಮ್ಮಿ, ಒಳ್ಳೆಯ ಬಿಳಿ ಬಣ್ಣದ ನಾಯಿಮರಿ. ಚಿನ್ನದ ಬಣ್ಣದ ಪಟ್ಟಿ ಬೇರೆ ಹಾಕಿದ್ದಾರೆ. ಯಾರದೋ ಮನೆಯಿಂದ ತಪ್ಪಿಸಿಕೊಂಡು ಬಂದಿರಬಹುದು ಮಮ್ಮಿ" ಕಿರಿಯವಳು ಪ್ರೀತಿ ನುಡಿದಳು.

"ನಾವದನ್ನು ಸಾಕೋಣವೇ ಮಮ್ಮಿ?" ಸ್ವಾತಿಯು ಗೋಗರೆದಳು. "ಏನಾದರೂ ಮಾಡಿಕೊಳ್ಳಿ. ಅದನ್ನು ಅಡಿಗೆ ಕೋಣೆಗೆ ಮತ್ತು ದೇವರ ಕೋಣೆಗೆ ತಂದರೆ ಮಾತ್ರ ನಾನು ಸುಮ್ಮನಿರುವುದಿಲ್ಲ" ಎಂದು ಮಮ್ಮಿಯು ನುಡಿದಳು.

ಸ್ವಾತಿಯು ಸಂತಸದಿಂದ ಒಳಗೋಡಿ ತಮ್ಮ ಹಳೆ ನಾಯಿಮರಿಯ ಕಬ್ಬಿಣದ

ಸಂಕೋಲೆಯನ್ನು ತಂದಳು. ಹಿಂದೆ ಅವರ ಮನೆಯಲ್ಲೊಂದು ಪೊಮೇರಿಯನ್ ಜಾತಿಯ ನಾಯಿಮರಿಯಿತ್ತು. ಒಂದು ದಿನ ಅದು ರಸ್ತೆಯನ್ನು ದಾಟುವಾಗ ಲಾರಿಯಡಿಗೆ ಸಿಕ್ಕಿ ಅಪ್ಪಚ್ಚಿಯಾಗಿ ಹೋಗಿತ್ತು. ಅಂದಿನಿಂದ ಅವರ ಮನೆಯಲ್ಲಿ ನಾಯಿಯಿರಲಿಲ್ಲ.

ಅವರು ಅದನ್ನು ಕಟ್ಟಿಹಾಕಿದರು. ಒಂದು ಸ್ಟೀಲಿನ ಪಾತ್ರೆಯಲ್ಲಿ ಹಾಲನ್ನು ತಂದು ಸುರುವಿ ಅದರ ಮುಂದಿಟ್ಟರು ಹುಡುಗಿಯರು. ಮೋತಿಗೆ ಹಾಲು ಕುಡಿಯಲು ಮನಸ್ಸಾಗಲಿಲ್ಲ. ಆದರೆ ಹೊಟ್ಟೆಯು ಹಸಿಯುತ್ತಿರುವಾಗ ಆ ಬಡಪಾಯಿಯು ಏನು ತಾನೇ ಮಾಡೀತು? ಅದು ನಿಧಾನವಾಗಿ'ಲೊಚಲೊಚಕ್ಕೆಂದು, ಹಾಲು ಕುಡಿಯಿತು. ಅದರ ಕಣ್ಣಿನಿಂದ ಎರಡು ಹನಿಗಳು ಉದುರಿ ಹಾಲಿನಲ್ಲಿ ಬೆರೆತುವು.

ಸ್ವಾತಿ, ಪ್ರೀತಿಯರಿಬ್ಬರು "ಪಾಪ, ಹೊಸದು ಮರಿ, ಅದಕ್ಕೇ ಅಳುತ್ತಾ ಇದೆ" ಎಂದು ಅನುಕಂಪಪಟ್ಟರು. ಮೋತಿಯ ಬೆನ್ನನ್ನು ಸವರಿ, 'ಅಳಬೇಡ ಮರಿ. ನಿನ್ನನ್ನು ನಾವು ಚೆನ್ನಾಗಿ ನೋಡಿಕೊಳ್ಳುತ್ತೇವೆ.' ಎಂದು ಧೈರ್ಯ ಹೇಳಿದರು.

* * *

ದಿನಕರರಾಯರು ಮೂರೂರಿನಲ್ಲಿ 'ಸ್ವಾತಿ ಸಾ ಮಿಲ್ಸ್' ಎಂಬ ಮರದ ಕಾರ್ಖಾನೆಯೊಂದನ್ನು ನಡೆಸುತ್ತಿದ್ದರು. ಕಾರು, ಬಂಗಲೆ, ಬ್ಯಾಂಕಿನಲ್ಲಿ ಲಕ್ಷಗಟ್ಟಲೆ ಹಣ-ಹೀಗೆ ಸಿರಿವಂತ ಮನುಷ್ಯನಿಗೆ ಬೇಕೆನಿಸುವುದೆಲ್ಲ ಅವರ ಬಳಿ ಇತ್ತು. ಅವರ ಪತ್ನಿಯ ಹೆಸರು ಮಂಗಳಾ. ಸ್ವಾತಿ, ಪ್ರೀತಿ ಇಬ್ಬರೇ ಹೆಣ್ಣುಮಕ್ಕಳು ಅವರಿಗೆ.

ಮಕ್ಕಳಿಬ್ಬರೂ ರವಿ– ಸಂಧ್ಯಾರ ಪ್ರಾಯದವು ಆಗಿದ್ದುವು.

ಹಾಗಾಗಿ ಮೋತಿಗೆ ಅವರೆಂದರೆ ತುಂಬಾ ಅಚ್ಚುಮೆಚ್ಚು.

ಅಕ್ಕ ತಂಗಿಯರಿಬ್ಬರೂ ಸೇರಿಕೊಂಡು ಮೋತಿಗೆ 'ಫ್ಯಾಂಟಮ್' ಎಂದು ಹೊಸ ಹೆಸರನ್ನಿಟ್ಟರು. ಅವರ ಹಳೆಯ ನಾಯಿಯ ಹೆಸರೂ ಅದೇ ಆಗಿತ್ತು. ಗರಿಗರಿಯಾದ ಸಿಹಿ, ಉಪ್ಪು ಮತ್ತು ಮಸಾಲೆಯ ಬಿಸ್ಕತ್ತುಗಳನ್ನು ಅದಕ್ಕೆ ತಿನ್ನಿಸುತ್ತಿದ್ದರು. ಬ್ರೆಡ್ಡು, ಕೇಕು ಮೊದಲಾದುವುಗಳನ್ನು ಅಷ್ಟೆತ್ತರಕ್ಕೆ ಎತ್ತಿ ಹಿಡಿಯುತ್ತಿದ್ದರು. ಫ್ಯಾಂಟಮ್ ಎರಡು

ಕಾಲುಗಳಲ್ಲಿ ನಿಂತು ಮೇಲೆ ಹಾರಿ ತಿಂಡಿಯನ್ನು ಹಿಡಿದುಕೊಳ್ಳಲು ಕಲಿಯಿತು. ಹೊಸಬರಿಗೆ 'ಶೇಖ್‌ಹ್ಯಾಂಡ್' ಕೊಡಲು ಕಲಿಸಿದವು ಆ ಹಸುಳೆಗಳು. ಅದು ಅಲ್ಲಿನ ಆಹಾರದಿಂದ ಮೊದಲಿಗಿಂತಲೂ ದಷ್ಟಪುಷ್ಟವಾಗಿ ಬೆಳೆಯಿತು. ಅದರ ಮನಸ್ಸಿಗೆ ಮಾತ್ರ ಉಲ್ಲಾಸವಿರಲಿಲ್ಲ. ಕಾರಣವೇನೆಂದರೆ, ಅದು ತನ್ನ ಹಳೆಯ ಗೆಳೆಯರ ಒಡನಾಟವನ್ನು ಮರೆತಿರಲಿಲ್ಲ.



**ಸ್ವಾತಿ – ಪ್ರೀತಿಯರು ಫ್ಯಾಂಟಮ್ ಅನ್ನು ವಾಕಿಂಗ್‌ಗೆ ಕರೆದೊಯ್ಯುತ್ತಿರುವುದು**

ಪ್ರತಿದಿನ ಸಾಯಂಕಾಲ ಶಾಲೆಯಿಂದ ಮರಳಿದ ಬಳಿಕ ಆ ಮುದ್ದು ಹುಡುಗಿಯರು ಫ್ಯಾಂಟಮನನ್ನು ಕಬ್ಬಿಣದ ಸಂಕೋಲೆಯಿಂದ ಬಂಧಿಸಿ ವಾಕಿಂಗಿಗೆ ಕರೆದುಕೊಂಡು ಹೋಗುತ್ತಿದ್ದರು. ಹೀಗೆ ನಾಯಿಗೆ ಅಲ್ಲಿ ರಾಜೋಪಚಾರವು ನಡೆಯುತ್ತಿತ್ತು.



ಪ್ರತಿರಾತ್ರಿಯೂ ಅದರ ಕೊರಳ ಸರಪಣಿಯನ್ನು ಬಿಚ್ಚಿ ಬಿಡುತ್ತಿದ್ದರು ಮನೆಯವರು. ಫ್ಯಾಂಟಮನಿಗೆ ಮನಸ್ಸಿಗೆಷ್ಟೇ ಬೇಸರವಿದ್ದರೂ ತಾನವರ ಕೂಳನ್ನು ತಿಂದುದಕ್ಕೆ ಪ್ರತಿಫಲವಾಗಿ ಅದು ನಿಷ್ಠೆಯಿಂದ ಅವರ ಮನೆಯನ್ನು ಕಾಯುತ್ತಿತ್ತು.

ಒಂದು ದಿನ ದಿನಕರರಾಯರು ಕಾರನ್ನು ಬೀದಿ ಬಾಗಿಲಲ್ಲಿ ನಿಲ್ಲಿಸಿ ಕಾಫಿ ಕುಡಿಯಲು ಮನೆಗೆ ಬಂದರು. ಗಡಿಬಿಡಿಯಲ್ಲಿ ತಮ್ಮ ಬ್ರೀಫ್‌ಕೇಸನ್ನು ಕಾರಿನಲ್ಲೇ ಮರೆತುಬಿಟ್ಟರು. ಫ್ಯಾಂಟಮ್‌ನನ್ನು ಗೇಟಿನ ಬಳಿಯೇ ಕಟ್ಟಿದ್ದರು. ಅದು ಕುಳಿತು ಕಾರಿನ ಕಡೆಗೆ ದೃಷ್ಟಿಸಿ ನೋಡುತ್ತಿತ್ತು. ಕೆಂಪು ಪಟ್ಟೆಪಟ್ಟೆಯ ಶರಾಯಿ, ಅದೇ ಬಣ್ಣದ ಬನಿಯನ್ನನ್ನು ಧರಿಸಿ ಬೀಡಿ ಹೊಗೆ ಬಿಡುತ್ತಾ ಬರುತ್ತಿದ್ದ ರೌಡಿಯೊಬ್ಬನನ್ನು ನೋಡಿತು ಅದು. ಅವನು ಕಾರಿನೊಳಗೆ ಕೈಹಾಕಿ ಕಪ್ಪು ಬ್ಯಾಗೊಂದನ್ನು ತೆಗೆದುಕೊಂಡು ಓಡುತ್ತಿದ್ದುದು ಅದರ ಚುರುಕು ಕಣ್ಣಿಗೆ ಕಂಡಿತು. ತನ್ನನ್ನು ಬಂಧಿಸಿದ್ದ ಸಂಕೋಲೆಯಿಂದ ತಪ್ಪಿಸಿಕೊಳ್ಳಲು ಹೆಣಗಾಡಿ ಕೊನೆಗೆ 'ಫಟಾರ್'' ಎಂದು ಸರಪಣಿಯನ್ನೇ ತುಂಡರಿಸಿತು ಅದು. ಒಂದೇ ಓಟಕ್ಕೆ ಹೊರಗೋಡಿ ಕಳ್ಳನ ಮುಂಗೈಯನ್ನು ಬಿಗಿಯಾಗಿ ಬಾಯಿಯಿಂದ ಕಚ್ಚಿ ಹಿಡಿದು ಬಿಟ್ಟಿತು. ಕಳ್ಳನು ಹೆದರಿ ಬೊಬ್ಬೆ ಹಾಕುತ್ತಿದ್ದನು. ಬೆವರಿನಿಂದ ಒದ್ದೆ ಮುದ್ದೆಯಾಗಿ ಗಡಗಡನೆ ನಡುಗುತ್ತಿದ್ದನು ಆ ರೌಡಿ. ಯಾರು ಬಿಡಿಸಹೋದರೂ ನಾಯಿಯು ಬಿಡುತ್ತಿರಲಿಲ್ಲ. ಕೊನೆಗೆ ಯಾರೋ ದಿನಕರರಾಯರಿಗೆ ವಿಷಯವನ್ನು ತಿಳಿಸಿದರು. ಅವರು 'ಕೆಟ್ಟೆನೊ ಬಿದ್ದೆನೊ' ಎಂದು ಓಡಿ ಬಂದರು. ಆ ಬ್ಯಾಗಿನಲ್ಲಿ ಐದು ಸಾವಿರ ರೂಪಾಯಿಗಳಿತ್ತು. ತಮ್ಮ ಮರೆವಿನಿಂದ ಆಗುತ್ತಿದ್ದ ಅನಾಹುತವನ್ನು ಫ್ಯಾಂಟಮನು ತಪ್ಪಿಸಿದುದನ್ನು ನೆನೆದು ಅವರಿಗೆ ತುಂಬ ಹಿಗ್ಗಾಯಿತು.

ಯಜಮಾನನನ್ನು ನೋಡುತ್ತಲೇ ಫ್ಯಾಂಟಮ್ ಕಳ್ಳನನ್ನು ಬಿಟ್ಟಿತು. ಬ್ರೀಫ್‌ಕೇಸನ್ನು ಬಾಯಲ್ಲಿ ಕಚ್ಚಿಕೊಂಡು ತಂದು ಒಡೆಯನಿಗೊಪ್ಪಿಸಿತು. ಅಲ್ಲಿ ನೆರೆದಿದ್ದ ಜನರೆಲ್ಲಾ ಮೂಗಿನ ಮೇಲೆ ಬೆರಳಿಟ್ಟರು. ಪೊಲೀಸ್ ಸಬ್‌ಇನ್ಸ್‌ಪೆಕ್ಟರ್ ಆನಂದರು ಕಳ್ಳನನ್ನು ಕೂಡಲೇ ತಮ್ಮ ವಶಕ್ಕೆ ತೆಗೆದುಕೊಂಡರು. ಆದರೆ ಕಳುವಿನ ವಸ್ತು ದೊರೆತ ಕಾರಣ ನಾಲ್ಕೇಟು ಬಿಗಿದು ಅವನನ್ನು ಬಿಟ್ಟರು. ಆತನು ನಾಯಿಯ ಕಡೆ ನೋಡಿ ಹೆದರುತ್ತ ಹೆದರುತ್ತ ಅಲ್ಲಿಂದ ಓಡಿಹೋದನು.

ಅಂದು ಅವರ ಮನೆಯಲ್ಲಿ ಫ್ಯಾಂಟಮನಿಗೆ ವೈಭವದ ಔತಣವು ಕಾದಿತ್ತು. ಫ್ಯಾಂಟಮನ ಮೇಲಿನ ಕೃತಜ್ಞತೆಯಿಂದ ಅದರ ತುಂಡಾದ ಕೊರಳ ಸರಪಣಿಯನ್ನು ಕಿತ್ತೆಸೆದರು ದಿನಕರರಾಯರು. "ಇಂದಿನಿಂದ ಅದು ಸ್ವೇಚ್ಛೆಯಾಗಿ ಓಡಾಡಿಕೊಂಡಿರಲಿ" ಎಂದು ಅದಕ್ಕೆ ಸ್ವಾತಂತ್ರ್ಯವನ್ನು ಕೊಟ್ಟರು. ಆ ಪುಟ್ಟ ಮಕ್ಕಳಿಗಂತೂ ಫ್ಯಾಂಟಮನನ್ನು ಮುದ್ದಿಸಿದಷ್ಟೂ ತೃಪ್ತಿಯಿರಲಿಲ್ಲ.

ಅನ್ನ ಹಾಕಿದ ಯಜಮಾನನ ಋಣಶೇಷವನ್ನು, ಆತನ ಸಂಪತ್ತನ್ನು ಕಾಪಾಡಿ ತೀರಿಸಿತ್ತು ಫ್ಯಾಂಟಮ್! ಇನ್ನು ಅದು ಅಲ್ಲಿ ನಿಲ್ಲುವುದರಲ್ಲಿ ಯಾವ ಅರ್ಥವೂ ಇರಲಿಲ್ಲ. ಅಂದು ಹೇಗೂ ಸಂಕೋಲೆಯ ಬಂಧನವಿರಲಿಲ್ಲ.

ಫ್ಯಾಂಟಮ್ ಓಡಿತು... ಓಡಿತು. ಕುಂಡೆಗೆ ಕಾಲುಕೊಟ್ಟು ಓಡಿತು. ಮರಗಿಡಗಳು, ಮನೆ ಮಠಗಳು ಒಂದೇ ಸಮನೆ ಮಾಯವಾಗುತ್ತಿದ್ದುವು. ಅದಕ್ಕೆ ಕಾಲು ಸೋತು ಕಣ್ಣು ಕತ್ತಲಿಕ್ಕುತ್ತಿತ್ತು. ಅದಕ್ಕೆ ತುಂಬಾ ಹಸಿವೂ ಬಾಯಾರಿಕೆಯು ಆಗಿದ್ದುವು. ಅದು ಸುತ್ತಲೂ ನೋಡಿತು.

ತುಸು ದೂರದಲ್ಲಿ ಅದಕ್ಕೆ ನಾಡಹೆಂಚಿನ ಪುಟ್ಟ ಮನೆಯೊಂದು ಗೋಚರಿಸಿತು. ಎರಡೇ ಕೋಣೆಗಳ ಪುಟ್ಟ ಮನೆಯದು. ಮಣ್ಣಿನ ಅಂಗಳವನ್ನು ಅಂದವಾಗಿ ಸೆಗಣಿಯಿಂದ ಸಾರಿಸಿದ್ದರು. ಅಂಗಳದ ಮುಂಭಾಗದಲ್ಲಿ ತುಳಸಿಕಟ್ಟೆಯಿತ್ತು. ಅದರಲ್ಲೊಂದು ತುಳಸಿಗಿಡವು ನಳನಳಿಸುತ್ತಿತ್ತು. ಪಕ್ಕದಲ್ಲೇ ಒಂದೆರಡು ನಂದಿಬಟ್ಟಲು ಹೂವಿನ ಗಿಡಗಳಿದ್ದವು. ಮೋತಿ ನಾಲಗೆಯನ್ನು ಹೊರ ಚಾಚಿ ಎದುಸಿರು ಬಿಡುತ್ತಾ ಆ ಮನೆಯ ಮೆಟ್ಟಿಲ ಬಳಿ ಬಂದು ಮಲಗಿತು.

ಅದು ನೋಡ ನೋಡುತ್ತಿದ್ದಂತೆ ಒಬ್ಬ ಹುಡುಗನು ಕೈಯಲ್ಲಿ ಏನನ್ನೋ ಮುಚ್ಚಿಟ್ಟುಕೊಂಡು ಮನೆಯಿಂದ ಹೊರಗೆ ಓಡಿದನು. ಅವನನ್ನು ಹಿಂಬಾಲಿಸಿ ಇಬ್ಬರು ಹುಡುಗರು ಓಡಿದರು. ಪುಟ್ಟ ಹುಡುಗಿಯೊಬ್ಬಳು ಲಂಗದಿಂದ ಕಣ್ಣೊರೆಸಿಕೊಂಡು ಹೊರಗೆ ಬಂದಳು. ಅಂಗಳದಲ್ಲಿ ಮಲಗಿದ್ದ ನಾಯಿಯನ್ನು ನೋಡಿ ಅಣ್ಣಂದಿರು ಕಸಿದುಕೊಂಡು ಹೋದ ಹಣ್ಣನ್ನು ಮರೆತು ಅಲ್ಲಿಯೇ ನಿಂತಳು. ಒಳಗೆ ತೆರಳಿ ಅಮ್ಮನನ್ನು ಕಾಡಿಬೇಡಿ ಸ್ವಲ್ಪ ಗಂಜಿಯ ತಿಳಿಯನ್ನು ಮಣ್ಣಿನ ಪಾತ್ರೆಗೆ ಹಾಕಿಸಿಕೊಂಡಳು. ಅದನ್ನು ತಂದು ನಾಯಿಯ ಮುಂದಿಟ್ಟಳು. ಹಸಿವಿನಿಂದ ಕಂಗಾಲಾಗಿದ್ದ ಅದಕ್ಕೆ ಅಮೃತವೇ ದೊರಕಿದಂತಾಯಿತು. ಅದು "ಲೊಚಕ್... ಲೊಚಕ್" ಎಂದು ಆ ಗಂಜಿಯ ನೀರನ್ನು ಕುಡಿಯಿತು. ಸ್ನೇಹದಿಂದ ಆ ಪುಟ್ಟ ಹುಡುಗಿಯನ್ನೇ ನೋಡಿತು. ನಿಧಾನವಾಗಿ ಮುಂದೆ ಸರಿದು ಆಕೆಯ ಕಾಲನ್ನು ನೆಕ್ಕಿತು. ಒಮ್ಮೆಲೇ "ಬೌವ್... ಬೌವ್" ಎಂದು ಬೊಗಳಿತು. 'ರವಿ ಮತ್ತು ಸಂಧ್ಯಾರ ಮನೆ ಎಲ್ಲಿದೆಯೆಂದು ನನಗೆ ಹೇಳುವಿಯಾ?' ಎಂದೇ ಅದರ ಮೂಕರೋದನವಾಗಿತ್ತು. ಆದರೆ ಆ ಬಾಲಕಿಗೆ ಅದರ ಭಾಷೆಯು ಅರ್ಥವಾಗಲೇ ಇಲ್ಲ.

* * *

ಚಿನ್ನಪ್ಪನು ವೃತ್ತಿಯಲ್ಲಿ ಕುಂಬಾರನಾಗಿದ್ದನು. ಮಣ್ಣಿನ ಮಡಕೆ, ಕುಡಿಕೆ, ಹಂಡೆ, ಗುಡಾಣಗಳನ್ನು ಅಂದವಾಗಿ ತಯಾರಿಸಿ ಕಾರ್ಕಳದ 'ಶನಿವಾರ ಸಂತೆ'ಯಲ್ಲಿ ಮಾರುತ್ತಿದ್ದನು. ಆದರೆ ಈಗೀಗ ಅಲ್ಯುಮಿನಿಯಮ್ ಮತ್ತು ಸ್ಟೀಲ್‌ನ ಸುಂದರವಾದ ಪಾತ್ರೆಗಳು ಮಾರುಕಟ್ಟೆಗೆ ಬರುತ್ತಿದ್ದುದರಿಂದ ಅವನ ವ್ಯಾಪಾರವು ಇಳಿಮುಖವಾಗಿತ್ತು. ಅವನ ಹೆಂಡತಿ ಭಾಗ್ಯಮ್ಮನು ಬೀಡಿಯನ್ನು ಕಟ್ಟಿ ತನ್ನ ಸಂಸಾರದ ಉದರ ಪೋಷಣೆಗೆ ಅಷ್ಟಿಷ್ಟು ನೆರವಾಗುತ್ತಿದ್ದಳು. ಹೀಗೆ ಅರಕ್ಕೆ ಏರದಂತೆ ಮೂರಕ್ಕೆ ಇಳಿಯದಂತೆ ಅವರ ಸಂಸಾರ ರಥವು ಹೇಗೋ ಸಾಗುತ್ತಿತ್ತು.

ಕುಂಬಾರ ಚಿನ್ನಪ್ಪನಿಗೆ ನಾಲ್ವರು ಮಕ್ಕಳಿದ್ದರು. ಮೊದಲ ಮೂವರು ಗಂಡುಮಕ್ಕಳಿಗೆ ಕ್ರಮ ಪ್ರಕಾರವಾಗಿ ಭೀಮು, ಸೋಮು ಮತ್ತು ರಾಮು ಎಂದವನು ಹೆಸರಿಟ್ಟಿದ್ದನು. ಲೀಲಳು ಕೊನೆಯ ಮಗಳಾಗಿದ್ದಳು.

'ಲೀಲಳು ನಾಯಿಗೆ ಪ್ರೀತಿಯಿಂದ 'ಬೊಗ್ಗ' ಎಂದು ಹೆಸರಿಟ್ಟಿದ್ದಳು.

ಅವರ ಮನೆಯ ಮುಂಭಾಗದಲ್ಲಿ ಸ್ವಲ್ಪ ಸರಕಾರಿ ಜಾಗವಿತ್ತು. ಅದರಲ್ಲೊಂದು ಕಾಟುಮಾವಿನ ಮರವಿತ್ತು. ಅದರ ಹಣ್ಣುಗಳನ್ನು ಯಾರು ಬೇಕಾದರೂ ಉಪಯೋಗಿಸಬಹುದಾಗಿತ್ತು. ಗಾಳಿ ಬಂದಾಗಲೆಲ್ಲ ಮಾವಿನಹಣ್ಣುಗಳು ಉದುರುತ್ತಿದ್ದುವು.

ಒಂದು ದಿನ ಜೋರಾಗಿ ಗಾಳಿಯು ಬೀಸಿತು. "ಬುಡಬುಡನೆ" ಮಾವಿನ ಹಣ್ಣುಗಳುದುರಿದುವು. ಲೀಲಳು ಹಣ್ಣನ್ನಾರಿಸಲು ಧಾವಿಸಿದಳು. ಬೊಗ್ಗನೂ ಅವಳ ಹಿಂದೆಯೇ ಓಡಿತು. ಕ್ಷಣಾರ್ಧದಲ್ಲಿ ಬಲಿಷ್ಠವಾದ ಗೂಳಿಯೊಂದು ಅಲ್ಲಿಗೆ ಧಾವಿಸಿ ಬಂತು. ಕಣ್ಣುಗಳಿಂದ ಬೆಂಕಿಯನ್ನುಗುಳುತ್ತ, ಮೂಗಿನಿಂದ 'ಬುಸ್ಸೆಂ'ದು ಉಸಿರು ಬಿಡುತ್ತಿತ್ತದು; ಅದು ಲೀಲಳನ್ನು ಹಾಯಲು ಮುಂದೆ ಬಂದಿತು; ಬೊಗ್ಗ ಮಿಂಚಿನ ವೇಗದಲ್ಲಿ ಅವಳನ್ನತ್ತ ತಳ್ಳಿ ತಾನು ಗೂಳಿಗೆದುರಾಗಿ ನಿಂತಿತು. ಗೂಳಿಯು ಅದನ್ನೇ ತಿವಿಯಲು ಬಂದಿತು. ಬೊಗ್ಗ ಸಂದಿಗೊಂದಿಗಳಲ್ಲಿ ನುಸುಳಿ, ಓಡಿ ಬಚಾವಾಯಿತು. ಇತ್ತ ಲೀಲಳೂ ಮನೆಯೊಳಗೋಡಿ ಅಪತ್ತಿನಿಂದ ಪಾರಾದಳು. ಬೊಗ್ಗನಿಗೆ ಈಗ ಮನದೊಳಗೆ ತುಂಬ ವ್ಯಥೆಯಾಯಿತು. ಆದಿನ... ಆ ದೈತ್ಯಾಕಾರದ ಕಪ್ಪು ನಾಯಿಯನ್ನು ತಾನು ಹೀಗೆಯೇ ಎದುರಿಸಿದ್ದಿದ್ದರೆ ಅದು ಖಂಡಿತವಾಗಿಯೂ ಓಡಿ ಹೋಗುತ್ತಿತ್ತು. ಅಂದು ತಾನು ಓಡಿದುದರಿಂದಲೇ ರವಿ-ಸಂಧ್ಯಾರ ಮನೆಯಿಂದ ದೂರವಾಗಬೇಕಾಯಿತೆಂದು ಅದು ದುಃಖಿಸಿತು.



ಬೊಗ್ಗ ಮತ್ತು ಗೂಳಿ

ಅನ್ನ ಹಾಕಿದ ಯಜಮಾನನ ಉಪಕಾರವನ್ನು ಆತನ .ಮಗಳನ್ನು ಕಾಪಾಡಿ ತೀರಿಸಿತ್ತು ಬೊಗ್ಗ; ಇನ್ನು ಅಲ್ಲಿ ನಿಲ್ಲುವುದರಲ್ಲಿ ಯಾವ ಅರ್ಥವೂ ಇರಲಿಲ್ಲ. ಇಲ್ಲಿ ಅದಕ್ಕೆ ಸಂಕೋಲೆಯ ಬಂಧನವೇ ಇರಲಿಲ್ಲ. ಬೊಗ್ಗ ಓಡಿತು... ಓಡಿತು. ಕುಂಡೆಗೆ ಕಾಲು ಕೊಟ್ಟು ಓಡಿತು. ಮರಗಿಡಗಳು, ಮನೆಮಠಗಳು ಮಾಯವಾಗುತ್ತಿದ್ದುವು. ಅದಕ್ಕೆ ಕಾಲು ಸೋತು ಕಣ್ಣು ಕತ್ತಲಿಕ್ಕುತ್ತಿತ್ತು; ಅದಕ್ಕೆ ತುಂಬಾ ಹಸಿವೂ ಬಾಯಾರಿಕೆಯೂ ಆಗಿದ್ದುವು. ಅದು ಸುತ್ತಲೂ ನೋಡಿತು.

ಅದಕ್ಕೆ ಆ ದಾರಿಯ ಪರಿಚಯವಿರುವಂತೆ ತೋರಿತು. ಅದು ನೆಲವನ್ನು ಮೂಸಿ ಮೂಸಿ ನಡೆಯಿತು. ಅದ್ದಕ್ಕೀಗ ಹಿಡಿಸಲಾರದಷ್ಟು ಸಂತಸವಾಗಿತ್ತು! ಅದು ರವಿ-ಸಂಧ್ಯಾರ ಮನೆಯ ದಾರಿಯನ್ನು ಹುಡುಕಿ ಹಿಡಿದಿತ್ತು! ಅದು ಕೊನೆಗೊಮ್ಮೆ ತನ್ನ ಗುರಿಯನ್ನು ಮುಟ್ಟಿತ್ತು.

* * *

ರವಿ ಮತ್ತು ಸಂಧ್ಯಾರು ತಮ್ಮ ಬರೆಯುವ ಮೇಜಿನ ಪಕ್ಕದ ಆರಾಮಾಸನದಲ್ಲಿ ದುಗುಡದಿಂದ ಕುಳಿತುಕೊಂಡಿದ್ದರು. ಮೋತಿಯು ಅವರನ್ನು ತೊರೆದು ಹೋಗಿ ಮೂರು ವಾರಗಳಾಗಿದ್ದುವು. ತಮಗೆ ತಿಳಿದ ಜಾಗಗಳಲ್ಲೆಲ್ಲ ಹುಡುಕಿದರು ಮಕ್ಕಳು. ಎಲ್ಲೂ ಅದರ ಸುಳಿವಿರಲಿಲ್ಲ. ನಿರಾಶರಾದರು ಅವರು.

ಶಿವಪ್ರಸಾದರು ತಮ್ಮ ಮಕ್ಕಳಿಗೆ ಬುದ್ಧಿಯನ್ನು ಹೇಳುತ್ತಿದ್ದರು. 'ಮೊದಲೇ ಅದು ಕಾಟುನಾಯಿ. ಏನೋ ಒಂದು ವರ್ಷ ನಿಮಗೆ ಋಣಾನುಬಂಧವಿತ್ತು. ಈಗ ಅದು ಎಲ್ಲಿಂದ ಬಂದಿತ್ತೋ ಅಲ್ಲಿಗೇ ಹೋಗಿರಬಹುದು. ಪ್ರಾಣಿಗಳ ಮೆದುಳು ಬಲು ಚಿಕ್ಕದು. ಸ್ವಲ್ಪ ಸಮಯದೊಳಗೇ ಅವು ನಮ್ಮನ್ನು ಮರೆತು ಬಿಡುತ್ತವಂತೆ. ನೀವೂ ಅದನ್ನು ಮರೆತುಬಿಡಿ. ನಿಮಗೆ ಬೇಕಾದರೆ ಒಳ್ಳೆಯ ಜಾತಿಯ ನಾಯಿಮರಿಯನ್ನು ತಂದು ಕೊಡುವ". ಆಗ "ಬೌವ್... ಬೌವ್" ಎಂದು ನಾಯಿಯೊಂದು ಬೊಗಳಿದ ಸದ್ದು ಕೇಳಿಸಿತು. ರವಿಯು ಕಿಟಕಿಯಿಂದ ಹೊರಗಿಣಿಕಿ ನೋಡಿದನು. ಅವನ ಮೈ ಒಮ್ಮೆಲೇ ಪುಳಕಿತಗೊಂಡಿತು.

ಮೋತಿಯು ಎದುಸಿರು ಬಿಡುತ್ತಾ ನಾಲಗೆಯನ್ನು ಹೊರಚಾಚಿ ಮನೆಯ ಮೆಟ್ಟಿಲ ಸಮೀಪ ನಿಂತಿದೆ;

"ಸಂಧ್ಯಾ ಅಕ್ಕ, ಪಪ್ಪಾ, ಅಮ್ಮಾ, ನಮ್ಮ ಮೋತಿಯು ಬಂದಿದೆ; ಅದು ನಮ್ಮನ್ನು ಮರೆಯಲಿಲ್ಲ. ಎಲ್ಲರೂ ಓಡಿಬನ್ನಿ.." ಎಂದು ರವಿಯು ಸಂತಸದಿಂದ ಕಿರಿಚಿದನು.

ಸಂಧ್ಯಾ, ರವಿ ಇಬ್ಬರೂ ಜೋರಾಗಿ ನೆಗೆದೋಡಿದರು. ರವಿಯು ಮೋತಿಯ ಬಳಿ ಸಾರಿ, "ಮೋತಿ, ನೀನು ನಮ್ಮನ್ನು ಮರೆತು ಇಷ್ಟು ದಿನ ಎಲ್ಲಿಗೆ ಹೋಗಿದ್ದೆ?" ಎಂದು ಕೇಳಿದನು.

ಮೋತಿಯು ಆತನನ್ನು ದಿಟ್ಟಿಸಿ ನೋಡಿ, "ಬೌವ್... ಬೌವ್" ಅಂದಿತು. ಅದರ ಕಣ್ಣಿನಿಂದ ಎರಡು ನೀರಿನ ಹನಿಗಳುರುಳಿದುವು. 'ನಾನು ನಿಮ್ಮನ್ನು ಮರೆಯಲಿಲ್ಲ. ಆದರೆ ನಾನು ಪಟ್ಟ ಬವಣೆಯನ್ನು ಹೇಗೆ ವಿವರಿಸಲಿ?' ಅನ್ನುವಂತಿರುವ ಅದರ ಅವಸ್ಥೆಯನ್ನು ನೋಡಿ ರವಿಯು ಅತ್ತೇಬಿಟ್ಟನು. ಉಮಾದೇವಿಯು ಸ್ವಲ್ಪ ಹಾಲನ್ನು ಅದರ ಪಿಂಗಾಣಿ ಪಾತ್ರೆಯಲ್ಲಿ ಹಾಕಿ ಮೋತಿಯ ಎದುರು ತಂದಿಟ್ಟಳು. ಅದು ಮೂರು

ವಾರಗಳಿಂದ ಆಹಾರವನ್ನೇ ನೋಡದವರಂತೆ 'ಲೊಚಲೊಚನೆ'' ಕುಡಿಯಿತು. ಈಗ ಅದಕ್ಕೆ ತುಂಬ ನಿಶ್ಚಿಂತೆಯಾಯಿತು. ಹೇಗೂ ಅದರ ಮನೆಗೆ ಅದು ಬಂದು ಸೇರಿದೆ. ಕಣ್ಣುಗಳನ್ನು ಬಿಗಿಯಾಗಿ ಮುಚ್ಚಿಕೊಂಡು ನಾಲ್ಕೂ ಕಾಲುಗಳನ್ನು ಉದ್ದಕ್ಕೆ ಚಾಚಿ ಮನೆಯ ಹೊಸ್ತಿಲ ಹೊರಗೆ ನಿದ್ರಿಸಿತು ಅದು.

* * *

ಅಂದು ಭಾನುವಾರವಾಗಿತ್ತು. ಸಂಧ್ಯಾ ಮತ್ತು ರವಿ ಬೇಗನೆ ಎದ್ದರು. ಬೆಳಗಿನ ಕೆಲಸಗಳನ್ನು ತೀರಿಸಿದರು. ಅಂದು ರಜಾ ದಿನ. ಮೋತಿಯು ಸಿಕ್ಕಿದ ಉಲ್ಲಾಸ ಬೇರೆ! ಹುರುಪಿನಿಂದ ಅದರೊಟ್ಟಿಗೇ ಕಾಫಿ-ಇಡ್ಲಿಗಳನ್ನು ತಿಂದು ಮುಗಿಸಿದರು. ಅಪ್ಪನ ಒಪ್ಪಿಗೆ ಪಡೆದು ಈಜಲು 'ಹೊಂಗೆಯ ಕೊಳ'ಕ್ಕೆ ತೆರಳಿದರು. ಮೋತಿಯು ದಡದಲ್ಲಿ ಅವರ ಬಟ್ಟೆಗಳನ್ನೆಲ್ಲಾ ಕಾದು ಕುಳಿತಿತ್ತು. ಅವರಿಂದ ಅಷ್ಟು ಕಾಲ ದೂರವಿದ್ದರೂ ಆ ಪ್ರಾಣಿಯು ಮಕ್ಕಳ ಹವ್ಯಾಸಗಳನ್ನು ಮರೆತಿರಲಿಲ್ಲ.



ಮೋತಿಯು ರವಿಯನ್ನು ಕೊಳದಿಂದ ಎಳೆಯುತ್ತಿರುವುದು

ಮೊದಲು ಸಂಧ್ಯಾ ನೀರಿಗೆ ಹಾರಿದಳು. ಅವಳ ಹಿಂದೆಯೇ ರವಿಯು ನೀರಿಗೆ ಹಾರಿದನು. ಅವನ ದುರದೃಷ್ಟ! ಅವನು ಹಾರಲಿಕ್ಕೂ ಅವನ ಭಾರಕ್ಕೆ ಸೋಪಾನದ ಮುರಕಲ್ಲೊಂದು ಸಿಡಿದು ಅವನ ಹಣೆಗೆ ಬಡಿಯಲಿಕ್ಕೂ ಒಂದೇ ಆಯಿತು. ಹಣೆಯಿಂದ ರಕ್ತವು ಹರಿಯಲಾರಂಭಿಸಿ ಆತನು ನೀರಿನಲ್ಲೇ ಎಚ್ಚರ ತಪ್ಪಿದನು. ಅವನು ನೀರಿನಲ್ಲಿ ಎರಡು ಬಾರಿ ಮುಳುಗಿ ಎದ್ದುದನ್ನು ನೋಡಿ ಮೋತಿಯು ತಡಮಾಡದೆ ನೀರಿಗೆ ಜಿಗಿಯಿತು. ಕಷ್ಟಪಟ್ಟು ಅವನ ಕಾಚಕ್ಕೆ ಬಾಯಿ ಹಾಕಿ ಅವನನ್ನೆಳೆದು ತೇಕುತ್ತ ತೇಕುತ್ತ ದಡಕ್ಕೆ ತಂದಿತು ಅದು. ರವಿಯು ಎಚ್ಚರ ತಪ್ಪಿ ಬಿದ್ದಿದ್ದನು. ಅದನ್ನು ನೋಡಿದ ಮೋತಿಯ ಕಾಲುಗಳು ಹೆದರಿ ನಡುಗಲಾರಂಭಿಸಿದವು. ಈಜು ಮುಗಿಸಿ ಮೇಲೆ ಬಂದ ಸಂಧ್ಯಾ ತಮ್ಮನ ಅವಸ್ಥೆಯನ್ನು ನೋಡಿ ಹೆದರಿ ಜೋರಾಗಿ ಅಳುತ್ತಿದ್ದಳು.

ಒಂದು ನಿಮಿಷ... ಒಂದೇ ನಿಮಿಷ; ಮೋತಿಯ ಪುಟ್ಟ ಮೆದುಳು ಚುರುಕಾಗಿ ಕೆಲಸ ಮಾಡಿತು. ಅದು ನಾಗಾಲೋಟದಿಂದ ಮನೆಯತ್ತ ಓಡಿತು.

ಶಿವಪ್ರಸಾದರು ಕಾದಂಬರಿ ಓದುತ್ತ ಹೊರಜಗುಲಿಯಲ್ಲಿ ಕುರ್ಚಿಯೊಂದರಲ್ಲಿ ಆಸೀನರಾಗಿದ್ದರು. ಮೋತಿಯು ಧಾವಿಸಿ ಅಲ್ಲಿಗೆ ಬಂದು ಅವರ ಲುಂಗಿಯನ್ನು ಬಾಯಲ್ಲಿ ಕಚ್ಚಿ ಜೋರಾಗಿ ಎಳೆಯಿತು.

ಅವರ ಹುಬ್ಬುಗಳು ಕೋಪದಿಂದ ಗಂಟಿಕ್ಕಿದುವು. ಅವರು ಒರಟಾಗಿ ನಾಯಿಯ ಬಾಯಿಯಿಂದ ತಮ್ಮ ಲುಂಗಿಯನ್ನು ಬಿಡಿಸಿಕೊಳ್ಳಲೆತ್ನಿಸುತ್ತ ಸಿಡುಕಿದರು. "ಏನು, ಈ ನಾಯಿಗೆ ಹುಚ್ಚುಗಿಚ್ಚು ಹಿಡಿಯುವುದರಲಿಲ್ಲವಷ್ಟೆ?"

ಊಹೂಂ, ಮೋತಿಯು ಹಿಡಿದ ಪಟ್ಟನ್ನು ಎಳ್ಳಷ್ಟೂ ಬಿಡಲಿಲ್ಲ. ಮುಖದ ಮೇಲೆ ಅವರು ಪೆಟ್ಟು ಹೊಡೆದರೂ ಬಿಡದೆ, "ಬೌವ್...ಬೌವ್" ಎಂದು ಆರ್ತವಾಗಿ ಕೂಗಿತು. ಅದರ ಕಣ್ಣುಗಳಿಂದ ನೀರಿನ ಹನಿಗಳು ಉರುಳಲಾರಂಭಿಸಿದುವು.

"ಅದು ನಿಮಗೆ ಏನನ್ನೋ ಹೇಳಲು ಪ್ರಯತ್ನಿಸುತ್ತಿದೆ. ದಯವಿಟ್ಟು ಅದನ್ನು ಅನುಸರಿಸಿ ಹೋಗಿ. ಏನೋ ನಡೆದಿದೆಯೆಂದು ನನಗೆ ಭಾಸವಾಗುತ್ತಿದೆ. ಈಜಲೆಂದು ಅದರ ಜೊತೆಗೆ ಹೋದ ಮಕ್ಕಳೆಲ್ಲಿ?" ಉಮಾದೇವಿಯ ಸ್ವರವು ನಡುಗಿತು.

"ನೀನೇನೂ ಹೆದರಬೇಡ. ದೇವರ ದಯೆಯಿಂದ ಏನೂ ಆಗಿರಲಿಕ್ಕಿಲ್ಲ"

ಎಂದು ಆಕೆಗೆ ಧೈರ್ಯವನ್ನು ಹೇಳಿದವರೇ, ಮೋತಿಯನ್ನನುಸರಿಸಿ ಓಟದ ನಡಿಗೆಯಲ್ಲಿ ಹೋದರು ಶಿವಪ್ರಸಾದರು.

ಉಮಾದೇವಿಗೆ ಹೆದರಿಕೆಯಿಂದ ಜೀವದಲ್ಲಿ ಜೀವವಿರಲಿಲ್ಲ. ಆಕೆಯೂ ಮನೆಗೆ ಬೀಗವನ್ನು ಹಾಕಿದವಳೇ ಅವರ ಹಿಂದೆಯೇ ಹೋದಳು.

ಶಿವಪ್ರಸಾದರು ರವಿಯನ್ನು ನೋಡಿದವರೇ ಬೆಚ್ಚಿಬಿದ್ದರು. ಒಂದು ಕ್ಷಣವನ್ನೂ ವ್ಯರ್ಥ ಮಾಡದೆ ಅವನನ್ನು ಬೋರಲಾಗಿ ಮಲಗಿಸಿದರು. ರವಿಯ ಹೊಟ್ಟೆಯನ್ನು ಅಮುಕಿ ಒಳಸೇರಿದ ನೀರೆಲ್ಲ ಅವನ ಬಾಯಿಂದ ಹೊರಬರುವಂತೆ ಮಾಡಿದರು. ಕೃತಕ ಶ್ವಾಸೋಚ್ಛ್ವಾಸ ನಡೆಸಿ ಮಗನಿಗೆ ಉಸಿರು ಬರಿಸಿದರು. ಈಗ ರವಿಗೆ ಕೊಂಚ ತಿಳಿವು ಬಂತು.

ಆ ಸಮಯಕ್ಕೆ ಸರಿಯಾಗಿ ಉಮಾದೇವಿಯೂ ಅಲ್ಲಿಗೆ ಬಂದಳು. ಒಂದು ಕೈಯಿಂದ ಮೋತಿಯನ್ನೂ, ಇನ್ನೊಂದು ಕೈಯಿಂದ ಮಗನನ್ನು ತಬ್ಬಿ ಅಳಲಾರಂಭಿಸಿದಳು.



ಪತ್ರಕರ್ತರು ಮೋತಿಯ ಭಾವಚಿತ್ರ ತೆಗೆದರು

ಹೀಗೆ ಬೆಟ್ಟದಂತೆ ಬಂದ ಆಪತ್ತು ಮೋತಿಯ ದಯೆಯಿಂದ ಮಂಜಿನಂತೆ ಮಾಯವಾಗಿತ್ತು! ಶಿವಪ್ರಸಾದರು ಅದರ ಬೆನ್ನನ್ನು ಪ್ರೀತಿಯಿಂದ ಸವರಿದರು. ಕಂಡೂ ಕಾಣದಂತೆ ಕಣ್ಣಿನಲ್ಲಿ ಹನಿದ ನೀರನ್ನು ಲುಂಗಿಯ ಚುಂಗಿನಿಂದ ಒರೆಸಿಕೊಂಡರಾತ. ಮಾತಿಗೆ ಮೀರಿದ ಆ ಭಾವನೆಯನ್ನು, ಆ ಮೂಕ ಪ್ರಾಣಿಯು ಅರ್ಥ ಮಾಡಿಕೊಂಡಿತು. ಸ್ನೇಹದಿಂದ ಅವರ ಕಾಲನ್ನು ನೆಕ್ಕಿ, 'ನಾನು ಅದನ್ನೆಲ್ಲ ಮರೆತಿದ್ದೇನೆ' ಅನ್ನುವಂತೆ "ಬೌವ್... ಬೌವ್" ಅಂದಿತು.

ನಿಮಿಷದೊಳಗೆ ಈ ವಿಷಯವು ಊರಲ್ಲೆಲ್ಲ ಹಬ್ಬಿತು. ಜನರು ಗುಂಪುಗುಂಪಾಗಿ ಜಾಣ ಮೋತಿಯನ್ನು ನೋಡಲು ಬಂದರು. ಪತ್ರಿಕೆಯವರು ಮೋತಿಯ ಭಾವಚಿತ್ರವನ್ನು ತೆಗೆದು ತಮ್ಮ ಪತ್ರಿಕೆಗೆ ವರದಿಯನ್ನು ಕಳುಹಿಸಲು ಶಿವಪ್ರಸಾದರ ಅನುಮತಿಯನ್ನು ಕೇಳಿದರು. ಅವರು ಸಂತಸದಿಂದ ಸಮ್ಮತಿಸಿದರು.

* * *

ಪತ್ರಿಕೆಯಲ್ಲಿ ಮೋತಿಯ ಸಾಹಸದ ಕತೆಯು ಅದರ ಚಿತ್ರ ಸಮೇತ ಪ್ರಕಟವಾಯಿತು. ರವಿ ಮತ್ತು ಸಂಧ್ಯಾ ಅದನ್ನು ನೋಡಿ ಸಂತಸದಿಂದ ಕುಣಿದಾಡಿದರು. ಶಿವಪ್ರಸಾದರಿಗಂತೂ ಅವರಿಗೆ ಗೊತ್ತಿದ್ದವರು, ಗೊತ್ತಿಲ್ಲದವರು ಅನೇಕರು ಬ್ಯಾಂಕಿಗೆ ಬಂದು ಅಭಿನಂದನೆಯ ಮಳೆಯನ್ನೇ ಕರೆದರು.

ಆ ಭಾನುವಾರ, ಬೆಳಿಗ್ಗೆ ಹತ್ತು ಘಂಟೆಯ ಸಮಯ ಇಬ್ಬರು ಅನಿರೀಕ್ಷಿತ ಅತಿಥಿಗಳು "ಸಂಧ್ಯಾ-ರವಿ ನಿಲಯ"ಕ್ಕೆ ಆಗಮಿಸಿದರು. ನಂಬರ್ ಒಂದು: ದಿನಕರ ರಾಯರು ಮತ್ತು ಪಾರ್ಟ- ದಿನಕರರಾಯರು ತಮ್ಮ ಕಾರಿನಲ್ಲಿ ಸ್ವಾತಿ, ಪ್ರೀತಿಯರೊಂದಿಗೆ ಅವರ ಮನೆಗೆ ಬಂದರು. ನಂಬರ್ ಎರಡು: ಚಿನ್ನಪ್ಪ ಮತ್ತು ಪಾರ್ಟ- ಚಿನ್ನಪ್ಪನು ಲೀಲಳ ಕೈಯನ್ನು ಹಿಡಿದುಕೊಂಡು ನಡೆದೇ ಅವರ ಮನೆಗೆ ಬಂದನು.

ಶಿವಪ್ರಸಾದರಿಗೆ ಅಚ್ಚರಿಯಾದರೂ ತೋರಗೊಡದೆ ಎಲ್ಲರನ್ನೂ ಸ್ವಾಗತಿಸಿದರು. ದಿನಕರರಾವ್, ಸ್ವಾತಿ ಮತ್ತು ಪ್ರೀತಿಯರು ಅಲ್ಲಿಯೇ ಇದ್ದ ಮಂಚದ ಮೇಲೆ ಕುಳಿತರು. ಉಳಿದವರು ಕುರ್ಚಿಗಳಲ್ಲಿ ಕುಳಿತರು. ಶಿವಪ್ರಸಾದರು ತಮ್ಮ ಪತ್ನಿಗೆ

ಕಣ್ಣುಸನ್ನೆ ಮಾಡಿದರು. ಅದರ ಅರ್ಥವನ್ನು ಗ್ರಹಿಸಿಕೊಂಡ ಅವಳು ಅತಿಥಿಗಳಿಗಾಗಿ ಚಹಾವನ್ನು ತಯಾರಿಸಲು ಒಳಗೆ ತೆರಳಿದಳು. ಆಗಾಗ ಅವರ ಮನೆಗೆ ಅತಿಥಿಗಳು ಬರುವುದು ಅಪರೂಪವೇನಾಗಿರಲಿಲ್ಲ. ಸಾಲಕ್ಕೋಸುಗ ಮಾಹಿತಿಯನ್ನು ಪಡೆಯಲು ಬರುವವರಲ್ಲಿ ಎಲ್ಲ ವರ್ಗದ ಜನರೂ ಇರುತ್ತಿದ್ದರು.

ಮೊದಲು ದಿನಕರರಾಯರು ತಮ್ಮ ಪರಿಚಯ ಹೇಳಿದರು. ಫ್ಯಾಂಟಮನು ತಮ್ಮ ಮನೆಗೆ ಬಂದು ಹತ್ತು ದಿನವಿದ್ದುದು, ಕಳ್ಳನನ್ನು ಹಿಡಿದು ಐದು ಸಾವಿರ ರೂಪಾಯಿಗಳನ್ನು ಉಳಿಸಿದುದನ್ನು ವಿವರಿಸಿದರು. ಪತ್ರಿಕೆಯಲ್ಲಿ ವಿಷಯವನ್ನೋದಿ ಮಕ್ಕಳು ಅದು ಫ್ಯಾಂಟಮ್ಮೇ ಇರಬೇಕೆಂದು ಹಟಹಿಡಿದುದನ್ನು ತಿಳಿಸಿದರು. ಕೊನೆಗೆ, "ನೀವು ಅದನ್ನು ನನಗೆ ಕೊಡುವಿರಾದರೆ ನಾನು ನನ್ನ ಮಕ್ಕಳಿಗೋಸುಗ ಐದು ಸಾವಿರ ರೂಪಾಯಿಗಳನ್ನಾದರೂ ಕೊಡಲು ಸಿದ್ಧನಿರುವೆನು" ಎಂದು ಶಿವಪ್ರಸಾದರನ್ನು ಕೇಳಿಕೊಂಡರು.

ಎರಡನೆಯದಾಗಿ ಚಿನ್ನಪ್ಪನು ಮುಂದೆ ಬಂದನು. ತನ್ನ ಪರಿಚಯ ಹೇಳಿದನು. ಬೊಗ್ಗನು ತಮ್ಮ ಮನೆಗೆ ಬಂದುದು, ಲೀಲಳನ್ನು ಗೂಳಿಯ ತಿವಿತದಿಂದ ಪಾರು ಮಾಡಿದುದನ್ನು ವಿವರಿಸಿದನು. ನೆರೆಮನೆಯವರು ಪೇಪರನ್ನೋದಿ ಅದು ಬೊಗ್ಗನೇ ಇರಬೇಕೆಂದು ಹೇಳಿ ತನ್ನನ್ನು ಇಲ್ಲಿಗೆ ಕಳುಹಿಸಿದುದನ್ನು ನೆನೆದನು. ಕೊನೆಗೆ, 'ನನ್ನ ಮಗಳಿಗೆ ಅದು ಅಂದರೆ ಜೀವ, ಅದಕ್ಕಾಗಿ ನಾನು ಬಂದದ್ದು' ಎಂದನು.

ಎಲ್ಲವನ್ನೂ ಆಲಿಸಿದ ಶಿವಪ್ರಸಾದರು ಗಂಭೀರರಾದರು. ಅವರು ತಮ್ಮ ಮಕ್ಕಳನ್ನುದ್ದೇಶಿಸಿ ಹೇಳಿದರು. "ಮಕ್ಕಳೇ, ನೀವು ಪ್ರೀತಿಯಿಂದ ಸಣ್ಣಮರಿ ಯಾಗಿದ್ದಾಗಿನಿಂದ ಸಾಕಿದ ಮೋತಿಯು ಯಾವುದೋ ಗಳಿಗೆಯಲ್ಲಿ ಇಲ್ಲಿಂದ ತಪ್ಪಿಸಿಕೊಂಡು ಓಡಿತು. ಅದು ಈ ಇಬ್ಬರು ಗಣ್ಯರಲ್ಲಿಯೂ ಅತಿಥಿಯಾಗಿ ಮೂರು ವಾರಗಳವರೆಗೆ ಉಳಿದುಕೊಂಡಿತ್ತು. ಅವರು ಅದಕ್ಕೆ ಆಹಾರವನ್ನಿತ್ತು ಅದನ್ನು ಪ್ರೀತಿಯಿಂದ ಸಾಕಿದರು. ಈಗ ಅವರೆಲ್ಲರೂ ಅದರ ಜಾಣ್ಮೆಯನ್ನು ಮೆಚ್ಚಿ ಅದನ್ನು ಕೊಂಡು ಹೋಗಲು ಮುಂದೆ ಬಂದಿರುವರು. ನಾವು ಈಗ ಇದನ್ನು ಯಾರಿಗೆ ಕೊಡೋಣ, ಹೇಳಿ ನೋಡುವ?"

ಸಂಧ್ಯಾಳಿಗೆ ತಟ್ಟನೆ ಏನುತ್ತರಿಸುವುದೆಂದು ಹೊಳೆಯಲಿಲ್ಲ. ರವಿಯು ಮಾತ್ರ ಮೋತಿಯ ಕೊರಳನ್ನು ಬಿಗಿಯಾಗಿ ತಬ್ಬಿಕೊಂಡು ಅದನ್ನು ಜಗುಲಿಗೆ ತರುತ್ತಾ, "ಪಪ್ಪಾ, ನಾನು ಇದನ್ನು ಯಾರಿಗೂ ಕೊಡುವುದಿಲ್ಲ. ಅವರವರ ಮನೆಯಲ್ಲಿ ಅನ್ನವನ್ನು ಹಾಕಿ

ಸಾಕಿದುದಕ್ಕೆ ಅವರಿಗೆಲ್ಲ ಉಪಕಾರವನ್ನು ಮಾಡಿಯೇ ಬಂದಿದೆಯಲ್ಲ" ಎಂದು ನುಡಿದನು.

ಶಿವಪ್ರಸಾದರು ಮುಗುಳ್ನಗುತ್ತಾ, "ರವಿ, ಹಾಗೆಲ್ಲ ಅನ್ನಬಾರದಪ್ಪ. ನಾನು ಹೇಳಿದ ಸೂಚನೆಯನ್ನು ನೀನು ಒಪ್ಪಿಕೊಳ್ಳುವುದಾದರೆ ಮಾತ್ರ ಹೇಳುತ್ತೇನೆ" ಎಂದು ನುಡಿದರು.

"ಹೇಳು ಪಪ್ಪಾ, ನೀನು ಹೇಳಿದುದನ್ನು ನಾನೆಂದಾದರೂ ಬೇಡ ಅಂದಿರುವೆನೇನು?" ಎಂದು ರವಿಯು ಸೋತ ದನಿಯಲ್ಲಿ ಹೇಳಿದನು.

"ಹಾಗಾದರೆ ಎಲ್ಲರೂ ಚೆನ್ನಾಗಿ ಮನಸ್ಸಿಟ್ಟು ಕೇಳಿ. ನಾವು ಈ ವಿಷಯವನ್ನು ನಾಯಿಗೇ ಬಿಡುವ. ನೀವೆಲ್ಲರೂ ಅದನ್ನು ಪ್ರೀತಿಯಿಂದ ಕರೆಯಿರಿ. ಅದಕ್ಕೆ ಯಾರೊಡನಿರಲು ಇಷ್ಟವಾಗುತ್ತದೆಯೋ ಅವರ ಜೊತೆಗೆ ಅದು ಹೋಗಲಿ."

ರವಿ ಮತ್ತು ಸಂಧ್ಯಾರನ್ನು ಬಿಟ್ಟು ಉಳಿದೆಲ್ಲರ ಮುಖಗಳೂ ಈ ಮಾತುಗಳನ್ನು ಕೇಳಿ ತಾವರೆ ಹೂವಿನಂತೆ ಅರಳಿದುವು. ಎಲ್ಲರೂ ಉತ್ಸುಕರಾಗಿ ಎದ್ದರು.

ಮೊದಲು ಸ್ವಾತಿಯು ಮುದ್ದಾಗಿ ಕರೆದಳು. "ಫ್ಯಾಂಟಮ್, ಇತ್ತ ಬಾ, ನಮ್ಮ ಗುರುತಿಲ್ಲವೆ ನಿನಗೆ? ಮಾಂಸ, ಬಿಸ್ಕತ್ತು, ಕೇಕುಗಳನ್ನು ನಿನಗೆ ಕೊಡುತ್ತೇನೆ ಬಾ."

ಪ್ರೀತಿ ಮತ್ತು ದಿನಕರರಾಯರು ಕಾತರದಿಂದ ಅದರ ಕಡೆಗೇ ನೋಡುತ್ತಿದ್ದರು.

ಫ್ಯಾಂಟಮ್ ಓಡಿ ಬಂದಿತು. ಮೊದಲು ಸ್ವಾತಿಯ, ಬಳಿಕ ಪ್ರೀತಿಯ ಕಾಲುಗಳನ್ನು ನೆಕ್ಕಿತು. ಅವರನ್ನು ಗುರುತಿಸಿ ಮೂಸಿತು. 'ನಿಮ್ಮ ನೆನಪಿದೆ' ಅನ್ನುವಂತೆ ಬಾಲವಲ್ಲಾಡಿಸಿತು. ಅವರ ಬಳಿಯೇ ನಿಂತುಕೊಂಡಿತು.

ಈಗ ಲೀಲಳು ಕರೆದಳು. "ಬೊಗ್ಗಾ, ಇತ್ತ ಬಾ. ನನ್ನ ಗುರುತಿಲ್ಲವೆ ನಿನಗೆ?"

ಬೊಗ್ಗ ಓಡಿ ಬಂದಿತು. ಅವಳ ಕಾಲುಗಳನ್ನು ನೆಕ್ಕಿತು. ಅವಳನ್ನು ಗುರುತಿಸಿ ಮೂಸಿತು. 'ನಿನ್ನ ಗುರುತಿದೆ' ಅನ್ನುವಂತೆ ಬಾಲವಲ್ಲಾಡಿಸಿತು. ಅವಳ ಬಳಿಯೇ ನಿಂತುಕೊಂಡಿತು.

ರವಿ ಮತ್ತು ಸಂಧ್ಯಾ [illegible] ...ಯು ತಮ್ಮಿಂದ ತಪ್ಪಿಹೋಗುತ್ತದೋ ಎಂಬ ದುಃಖದಿಂದ ಅದನ್ನು ಕರೆಯಲು ಅವರಿಂದ ಆಗಲೇ ಇಲ್ಲ. ತಲೆತಗ್ಗಿಸಿ ಕಣ್ಣೀರು ಸುರಿಸುತ್ತ ಕುಳಿತುಕೊಂಡಿದ್ದರು ಅವರಿಬ್ಬರೂ.

ಮೋತಿಯು ಈಗ ರವಿ ಮತ್ತು ಸಂಧ್ಯಾರು ತನ್ನನ್ನು ಕರೆಯುವರೋ ಎಂದು ಕಾದು ನೋಡಿತು. ಅವರು ಸುಮ್ಮನೆ ಇದ್ದರು. ಥಕ್ಕನೆ ಏನನ್ನೋ ಯೋಚಿಸಿ ಓಡಿ ಬಂದು ರವಿ-ಸಂಧ್ಯಾರ ನಡುವೆ ಬಂದು ನಿಂತಿತು. ಉಳಿದವರು ಎಷ್ಟು ಕರೆದರೂ ಅದು ಅತ್ತ ನೋಡಲೇ ಇಲ್ಲ. ಬದಲಾಗಿ ತಲೆ ಎತ್ತಿ ಎಲ್ಲರನ್ನೂ ದಿಟ್ಟತನದಿಂದ ನೋಡಿತು. ಮತ್ತೆ "ಬೌವ್... ಬೌವ್... ಬೌವ್... ಬೌವ್" ಎಂದು ಗಟ್ಟಿಯಾಗಿ ಬೊಗಳಿತು 'ನನಗೆ ನನ್ನ ಮನೆಯು ಸಿಕ್ಕಿದೆ. ನೀವೆಲ್ಲರೂ ನಿಮ್ಮ ನಿಮ್ಮ ಮನೆಗಳಿಗೆ ಹೋಗಿ, ನಾನು ಬರಲಾರೆ' ಎಂದು. ಎಲ್ಲರೂ ಅದರ ಭಾಷೆಯನ್ನು ಅರ್ಥ ಮಾಡಿಕೊಂಡರು.

ಆಗ ಉಮಾದೇವಿಯು ಒಂದು ಟ್ರೇಯಲ್ಲಿ ಹೊಗೆಯಾಡುವ ಚಹಾದ ಬಟ್ಟಲುಗಳನ್ನು ಓರಣವಾಗಿಟ್ಟುಕೊಂಡು ತಂದಳು.

ಎಲ್ಲರೂ ನಿಧಾನವಾಗಿ ಚಹಾವನ್ನು ಕುಡಿದು ಮುಗಿಸಿದರು. ಮೋತಿಯನ್ನು ಮೆಚ್ಚಿ ಹೊಗಳಿದರು. ಮೋತಿಯು ನೀಡಿದ ತೀರ್ಪನ್ನು ಒಪ್ಪಿದರು. ತಮ್ಮ ತಮ್ಮ ಮನೆಗಳಿಗೆ ಹಿಂತಿರುಗಿದರು.

ಈಗ ಮೋತಿಯು ತನ್ನ ಪಿಂಗಾಣಿ ಬಟ್ಟಲಿನಲ್ಲಿ ಸುರಿದ ಹಾಲನ್ನು ಬೇಗ ಬೇಗ ಖಾಲಿ ಮಾಡುತ್ತಿದೆ. ನಿಧಾನವಾಗಿ ಕುಡಿಯಲು ಅದಕ್ಕೆ ಪುರುಸೊತ್ತಿಲ್ಲ. ಆಟವನ್ನಾಡಲು ರವಿ ಮತ್ತು ಸಂಧ್ಯಾ ಅದನ್ನು ಕರೆಯುತ್ತಾ ಇದ್ದಾರೆ. ಚೆಂಡು ದೂರ ಹೋಗಿ ಬಿದ್ದಿದೆ. ಚೆಂಡನ್ನು ಬಾಯಲ್ಲಿ ಕಚ್ಚಿ ತರಬೇಕು. ನೀವೇನಾದರೂ ಅದನ್ನು ಕರೆದೀರಿ ಜೋಕೆ.!

* * *

ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರಧಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು